ಉಪನ್ಯಾಸಗ್ರಂಥಮಾಲೆ

೧೧

# ಸಂಸ್ಕೃತ ಕವಯಿತ್ರಿಯರು

ವಿದ್ವಾನ್, ಶಿರೋಮಣಿ, ಎಮ್. ಎ.



ರ್ನಾಟಕ ವಿಶ್ವವಿದ್ಯಾಲಯ

ಧಾ ರ ವಾ ಡ

ನವಂಬರ ೧೯೫೭

# ಸಂಸ್ಕೃತ ಕವಯಿತ್ರಿಯರು

ಕೆ. ಟಿ. ಪಾಂಡುರಂಗಿ
ವಿದ್ವಾನ್, ಶಿರೋಮಣಿ, ಎಮ್. ಎ.



ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ನವಂಬರ ೧೯೫೭

ಕರ್ನಾಟಕ ಸಾಹಿತ್ಯ ಮಂದಿರ,
ಧಾರವಾಡ.

ಪ್ರಕಾಶಕರು :
ಎಸ್. ಎಸ್. ಒಡೆಯರ, ಎಮ್.ಎ., ಎಲ್‌ಎಲ್.ಬಿ.
ರಜಿಸ್ಟ್ರಾರ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಮೊದಲನೆಯ ಮುದ್ರಣ

೨,೦೦೦ ಪ್ರತಿಗಳು

ಬೆಲೆ : ೪ ಆಣೆ

ಮುದ್ರಕರು :
ಕೆ. ಜಿ. ಮತ್ತು ಎ. ಎಸ್. ಜಕಾರ
ಕರ್ನಾಟಕ ಪ್ರಿಂಟಿಂಗ ವರ್ಕ್ಸ, ಧಾರವಾಡ

# ಮಾಲೆಯ ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ಸಮಿತಿಯು ಸಿದ್ಧಪಡಿಸಿದ ಯೋಜನೆಯ ಮೇರೆಗೆ ಮೊದಲನೆಯ ಉಪನ್ಯಾಸ ಮಾಲೆ ೧೯೫೨ನೆಯ ನವಂಬರ್ ತಿಂಗಳಲ್ಲಿ ಗದಗಿನಲ್ಲಿ ನೆರವೇರಿತು. ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯಕ್ಕೆ ತಿಳಿಯುವ ಶೈಲಿಯಲ್ಲಿ ಉಪನ್ಯಾಸಗಳನ್ನು ಕನ್ನಡದಲ್ಲಿ ಕೊಟ್ಟರು. ವಿಶ್ವವಿದ್ಯಾಲಯದ ಜ್ಞಾನಭಂಡಾರವನ್ನು ಕಾಲೇಜು ತರಗತಿಗಳಿಗೆ ಮೀಸಲಾಗಿ ಇಡದೆ ಅದರ ಅಲ್ಪಾಂಶವನ್ನಾದರೂ ಮಹಾಜನರ ಮನೆಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ ಪ್ರೋತ್ಸಾಹವೂ ದೊರೆತುವು. ಅಂದು ಗದಗಿನಲ್ಲಿ ಪ್ರಾರಂಭಿಸಿದ ಉಪನ್ಯಾಸಮಾಲೆ ಈಚೆಗೆ ಉತ್ತರಕರ್ನಾಟಕದ ಹಲವು ಊರುಗಳಲ್ಲಿ ನಡೆದಿದೆ, ಮುಂದೆಯೂ ನಡೆಯಲಿದೆ. ಇದು ನಮ್ಮ ವಿಶ್ವವಿದ್ಯಾಲಯದ ಪ್ರತಿ ತಿಂಗಳ ಕಾರ್ಯಕ್ರಮವಾಗಿ ಪರಿಣಮಿಸಿದೆ.

ಇಂಥ ಉಪನ್ಯಾಸಗಳನ್ನು ವಿದ್ವಾಂಸರ ಮುಖದಿಂದ ಪ್ರತ್ಯಕ್ಷವಾಗಿ ಕೇಳುವ ಜನರಿಗೆ ಆಸಕ್ತಿಯೂ ತಿಳಿವಳಿಕೆಯೂ ಹೆಚ್ಚುವುದು ಸಹಜ. ಆದರೆ ಉಪನ್ಯಾಸದ ಮಾತು ಕೇಳಿದ ಕಿವಿಯಲ್ಲೇ ಕರಗಿ ಹೋಗುತ್ತದೆ; ಕೆಲವು ಕಾಲ ಕಳೆದ ಬಳಿಕ ಉಪನ್ಯಾಸದ ವಿವರಗಳನ್ನು ನೆನಪಿಗೆ ತಂದುಕೊಳ್ಳುವುದು ಸಭೆಯಲ್ಲಿದ್ದವರಿಗೇ ಅಶಕ್ಯ

ವಾಗುತ್ತದೆ. ಬೇರೆ ಊರಿನವರಂತೂ ಇವುಗಳ ಲಾಭವನ್ನು ಪಡೆಯುವ ಹಾಗೆಯೇ ಇಲ್ಲ. ಆದಕಾರಣ ಉಪನ್ಯಾಸಗಳನ್ನು ಕೊಡಿಸಿದಷ್ಟಕ್ಕೇ ತೃಪ್ತಿಗೊಳ್ಳದೆ, ಇವುಗಳಲ್ಲಿ ಕೆಲವನ್ನಾದರೂ ಗ್ರಂಥರೂಪದಲ್ಲಿ ಬರೆಯಿಸಿ, ಸುಲಭವಾದ ಬೆಲೆಗೆ ಪ್ರಕಟಿಸಿ, ಕನ್ನಡ ಜನದಲ್ಲೆಲ್ಲ ಹರಡಬೇಕೆಂಬ ಸೂಚನೆ ಸಹಜವಾಗಿಯೇ ಬಂದಿತು. ಇದನ್ನು ವಿಶ್ವವಿದ್ಯಾಲಯದ ಪ್ರಕಟನ ಸಮಿತಿ ಉತ್ಸಾಹದಿಂದ ಅಂಗೀಕರಿಸಿತು. ಈ ಬಗೆಯ ಪ್ರಯತ್ನ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಹಿಂದೆಯೇ ನಡೆದು ಇಂಥಮೊಂದು ಗ್ರಂಥಮಾಲೆ ಅಲ್ಲಿ ಜನಪ್ರಿಯವಾಗಿ ಪರಿಣಮಿಸಿದ ಸಂಗತಿ ನಮ್ಮ ಸಂಕಲ್ಪಕ್ಕೆ ಮತ್ತಷ್ಟು ಹುರುಪನ್ನು ಕೊಟ್ಟಿತು. ಹೀಗೆ ವಿಶ್ವವಿದ್ಯಾಲಯದ ಜನತಾಶಿಕ್ಷಣ ಕಾರ್ಯವು ಈ 'ಉಪನ್ಯಾಸ ಗ್ರಂಥಮಾಲೆ'ಯ ಮೂಲಕ ಇನ್ನೊಂದು ಹೆಜ್ಜೆಯನ್ನು ಮುಂದಕ್ಕೆ ಇರಿಸಿದೆ.

ನಮ್ಮ ಪ್ರಾರ್ಥನೆಗೆ ಮನ್ನಣೆಕೊಟ್ಟು, ಪ್ರತಿಫಲದ ಅಪೇಕ್ಷೆ ಇಲ್ಲದೆಯೆ, ಉಪನ್ಯಾಸಕರು ಪುಸ್ತಕಗಳನ್ನು ಬರೆದು ಕೊಡುತ್ತಿರುವುದು ಶ್ಲಾಘ್ಯವಾದ ವಿಷಯ; ಇದಕ್ಕಾಗಿ ಈ ಲೇಖಕ ಮಹಾಶಯರಿಗೆ ವಿಶ್ವವಿದ್ಯಾಲಯದ ವಂದನೆಗಳನ್ನು ಸಂತೋಷದಿಂದ ಸಲ್ಲಿಸುತ್ತೇನೆ. ಈ 'ಉಪನ್ಯಾಸ ಗ್ರಂಥಮಾಲೆ' ಕನ್ನಡಿಗರ ಪ್ರೀತಿಗೆ ಪಾತ್ರವಾಗಲೆಂದು ಇದರ ಪ್ರಕಾಶನದಿಂದ ನಮ್ಮ ಜನತೆಯ ಜ್ಞಾನಾಸಕ್ತಿ ಪುಷ್ಟಿಗೊಳ್ಳಲೆಂದು ಹಾರೈಸುತ್ತೇನೆ.

ಧಾರವಾಡ
೧-೧-೧೯೫೫

ಡಿ. ಸಿ. ಪಾವಟೆ
ಉಪಕುಲಪತಿ
ಕರ್ನಾಟಕ ವಿಶ್ವವಿದ್ಯಾಲಯ

# ವಿಜ್ಞಾಪನೆ

ವಿದ್ಯಾರ್ಥಿಯಾಗಿದ್ದಾಗ ವಿಜ್ಜಿಕೆಯ ಕೆಲವು ರಸವತ್ತಾದ ಪದ್ಯಗಳನ್ನು ಓದಿ ಉಂಟಾದ, ಅವಳು ಕರ್ನಾಟಕದವಳೆಂದು ತಿಳಿದು ಇನ್ನೂ ಹೆಚ್ಚಾದ ನನ್ನ ಆಸ್ಥೆಯು ಅವಳ ಕೃತಿಗಳ ಹೆಚ್ಚಿನ ಅಭ್ಯಾಸಕ್ಕೆ ನನ್ನನ್ನು ತೊಡಗಿಸಿತು. ಮುಂದೆ ಕರ್ನಾಟಕದ ಇನ್ನೋರ್ವ ಸಂಸ್ಕೃತ ಕವಯಿತ್ರಿ ಗಂಗಾದೇವಿಯ ಕೃತಿಯು ನನ್ನ ಮನಸ್ಸನ್ನು ಸೆಳೆಯಿತು. .ಮಿತ್ರರಾದ ಶ್ರೀ. ಚೆನ್ನವೀರ ಕಣವಿಯವರ ಪ್ರೇರಣೆಯಿಂದ ಇನ್ನಿತರ ಸಂಸ್ಕೃತ ಕವಯಿತ್ರಿಯರ ಕೃತಿಗಳನ್ನೂ ಓದುವ ಸಂದರ್ಭವೊದಗಿ ರಾಮದುರ್ಗದಲ್ಲಿ ನಡೆದ ವ್ಯಾಸಂಗ ವಿಸ್ತರಣೋಪನ್ಯಾಸ ಶಿಬಿರದಲ್ಲಿ " ಸಂಸ್ಕೃತ ಕವಯಿತ್ರಿಯರು " ಎಂಬ ವಿಷಯವಾಗಿ ಕೊಟ್ಟ ಉಪನ್ಯಾಸವು ಈಗ ಈ ಚಿಕ್ಕ ಹೊತ್ತಿಗೆಯ ರೂಪದಲ್ಲಿ ಪ್ರಕಟವಾಗುತ್ತಿದೆ.

ಸಂಸ್ಕೃತ ಕಾವ್ಯಗಳಲ್ಲಿ ಬರುವ ರಸವತ್ತಾದ ಭಾಗಗಳನ್ನು ಸಹೃದಯರಾದ ಮಿತ್ರರೊಡನೆ ಚರ್ಚಿಸುವದೂ ಉಪನ್ಯಾಸ ಕೊಡುವದೂ ಸುಲಭ ಹಾಗು ಸಂತೋಷದ ವಿಷಯ. ಆದರೆ ಈ ಹರಟೆಗಳನ್ನು ಪುಸ್ತಕದ ರೂಪದಲ್ಲಿ ಸಿದ್ಧಪಡಿಸುವದು ಕಷ್ಟ-ಸಾಧ್ಯವಾದ ಕೆಲಸ. ಹರಟೆ ಅಥವಾ ಉಪನ್ಯಾಸಗಳಲ್ಲಿ ಶ್ಲೋಕಗಳು, ಅನುವಾದ, ವಿಮರ್ಶೆ, ಸಂಶೋಧನೆ ಎಲ್ಲವನ್ನೂ ನಿರರ್ಗಳವಾಗಿ ಬೆರಸುತ್ತ ಹೋಗಬಹುದು. ಆದರೆ ಪುಸ್ತಕರೂಪದಲ್ಲಿ ಬರೆಯಲು ಹೊರಟರೆ ಪಂಡಿತರಿಗೂ, ಪಾಮರರಿಗೂ ತೃಪ್ತಿಯಾಗುವಂಥ ಪಡಿಯಚ್ಚಿನಲ್ಲಿ ಇವೆಲ್ಲವನ್ನೂ ಬೆರೆಯಿಸುವದು ಕಷ್ಟಸಾಧ್ಯವಾಗುತ್ತದೆ. ಆದರೂ ಬರೆಯಲೇಬೇಕಾದ ಸಂದರ್ಭ ಬಂದದ್ದ

ರಿಂದ ಸಂಸ್ಕೃತ ಕವಯಿತ್ರಿಯರ ಬಿಡಿಪದ್ಯಗಳ ಮತ್ತು ಪೂರ್ಣ ಕೃತಿಗಳ ಪರಿಚಯವನ್ನು ಮಾತ್ರ ಮಾಡಿಕೊಡುವ ದೃಷ್ಟಿಯಿಂದ ಧಾರಾವಾಹಿಯಾದ ಹರಟೆಯ ಶೈಲಿಯಲ್ಲಿಯೇ ಈ ಚಿಕ್ಕ ಹೊತ್ತಿಗೆಯನ್ನು ಬರೆದು ಮುಗಿಸಿದ್ದೇನೆ. ಕೆಲವು ಕಡೆಗೆ ವಿವರಗಳು ಹೆಚ್ಚಾಗಿದ್ದರೆ ಇನ್ನು ಕೆಲವು ಕಡೆಗೆ ನನಗೆ ಹೇಳಬೇಕಾದುದನ್ನೆಲ್ಲ ಹೇಳಿದ ತೃಪ್ತಿಯೆನಿಸಿಲ್ಲ. ನನ್ನ ಯೋಗ್ಯತೆಯ ಮತ್ತು ಸ್ಥಳದ ಪರಿಮಿತಿಯನ್ನನುಲಕ್ಷಿಸಿ ಇಲ್ಲಿಯ ಲೋಪ-ದೋಷಗಳನ್ನೆಲ್ಲ ಸಹೃದಯರು ಕ್ಷಮಿಸಬೇಕಾಗಿ ಪ್ರಾರ್ಥನೆ.

ಈ ಉಪನ್ಯಾಸವನ್ನು ಕೊಡಲು ಅವಕಾಶವಿತ್ತು ಅದನ್ನು ಪುಸ್ತಕ ರೂಪದಲ್ಲಿ ಪ್ರಕಟಿಸುತ್ತಿರುವ ಕರ್ನಾಟಕ ವಿಶ್ವವಿದ್ಯಾನಿಲಯದ ಅಧಿಕಾರಿಗಳಿಗೆ ನನ್ನ ಕೃತಜ್ಞತೆಗಳು.

೨೪-೧೦-೫೭
ಬಲಿ ಪಾಡ್ಯಮಿ.

ಕೆ. ಟಿ. ಪಾಂಡುರಂಗಿ
ಕರ್ನಾಟಕ ಕಾಲೇಜ, ಧಾರವಾಡ.

# ಅನುಕ್ರಮಣಿಕೆ

# ಉಪನ್ಯಾಸ ಗ್ರಂಥಮಾಲೆ

೧. ಭವಭೂತಿ
ಡಾ. ಕೆ. ಕೃಷ್ಣಮೂರ್ತಿ, ಎಮ್.ಎ.ಬಿ.ಟಿ., ಪಿಎಚ್.ಡಿ.

೨. ಮನೋರೋಗಗಳು
ಪ್ರೊ. ಎನ್. ಆರ್. ಕುಲಕರ್ಣಿ, ಎಮ್.ಎ., ಎಲ್ಎಲ್.ಬಿ.

೩. ಪ್ರಥಮ ಪಂಚವಾರ್ಷಿಕ ಯೋಜನೆ ಹಾಗೂ ಒಕ್ಕಲತನ
ಡಾ. ಎನ್. ಪಿ. ಪಾಟೀಲ, ಬಿ ಎಸ್.ಸಿ.(ಅಗ್ರಿ.), ಪಿಎಚ್.ಡಿ.

೪. ಗಾದೆಗಳು
ಪ್ರೊ. ಎ ಕೆ. ರಾಮಾನುಜನ್, ಎಂ.ಎ.

೫. ಭಾರತದಲ್ಲಿ ಜಾತಿಪದ್ಧತಿ
ಡಾ. ವಿಕ್ಟರ ಎಸ್. ಡಿಸೋಜಾ, ಎಂ.ಎ., ಪಿಎಚ್.ಡಿ.

೬. ಮುಂಬಯಿ ಕರ್ನಾಟಕದಲ್ಲಿಯ ಮುಖ್ಯ ಬೆಳೆಗಳನ್ನು ನಾಶ ಮಾಡುವ ಕೀಟಕ ಪಿಡುಗುಗಳ ಸಮೀಕ್ಷಣೆ
ಪ್ರೊ ಎಸ್. ಎಸ್. ಕಟಗಿಹಳ್ಳಿಮಠ, ಎಂ.ಎಸ್‌ಸಿ.,

೭. ರಾಜಕೀಯ ಪಕ್ಷಗಳು
ಪ್ರೊ. ಎನ್. ರಾಜಗೋಪಾಲರಾವ್, ಎಂ. ಎ.

೮ ಸ್ವಾದಿ ಅರಸುಮನೆತನ
ಪ್ರೊ. ಸ. ಸ. ಮಾಳವಾಡ, ಎಂ.ಎ.

೯. ಮಕ್ಕಳ ಶಿಕ್ಷಣ
ಡಾ. ಡಿ. ಎಸ್. ಕರ್ಕಿ, ಎಂ.ಎ., ಪಿಎಚ್.ಡಿ.

೧೦. ಮೂಢ ನಂಬಿಕೆಗಳು
ಪ್ರೊ. ಎಲ್. ಆರ್. ಹೆಗಡೆ, ಎಂ.ಎ.

೧೧. ಸಂಸ್ಕೃತ ಕವಯಿತ್ರಿಯರು
ಪ್ರೊ. ಕೆ. ಟಿ. ಪಾಂಡುರಂಗಿ, ಎಂ.ಎ.

ಬೆಲೆ: ಪ್ರತಿ ಒಂದಕ್ಕೆ ೪ ಆಣೆ.

# ಸಂಸ್ಕೃತ ಕವಯಿತ್ರಿಯರು

"ಪುರುಷರಂತೆ ಸ್ತ್ರೀಯರೂ ಕವಿಗಳಾಗಬಲ್ಲರು. ಕಾವ್ಯ ನಿರ್ಮಾಣಕ್ಕೆ ಅಗತ್ಯವಾದ ಸಂಸ್ಕಾರವು ಆತ್ಮಗತವಾಗಿದ್ದು ಸ್ತ್ರೀ ಪುರುಷರೆಂಬ ಲಿಂಗಭೇದವನ್ನು ಅವಲಂಬಿಸಿರುವದಿಲ್ಲ" ಎಂದು ೧೦ನೆಯ ಶತಮಾನದ ಕಾವ್ಯಮೀಮಾಂಸಾಕರ್ತೃ ರಾಜಶೇಖರನು ಹೇಳಿದ್ದಾನೆ.

**'ಶೀಲಾ ವಿದ್ಯಾ ಮಾರುಲಾ ಮೋರಿಕಾದ್ಯಾಃ**
**ಕಾವ್ಯಮ್ ಕರ್ತುಮ್ ಸಂತಿ ವಿಜ್ಞಾಃ ಸ್ತ್ರಿಯೋಽಪಿ'**

ಎಂದು ಧನದದೇವನು ಕೆಲ ಸಂಸ್ಕೃತ ಕವಯಿತ್ರಿಯರ ಹೆಸರು ಗಳನ್ನು ಉಲ್ಲೇಖಿಸುವನು.

ಕವೀಂದ್ರವಚನಸಮುಚ್ಚಯ, ಸದುಕ್ತಿಕರ್ಣಾಮೃತ, ಶಾರ್ಙಧರ ಪದ್ಧತಿ, ಸೂಕ್ತಿಮುಕ್ತಾವಲಿ, ಸುಭಾಷಿತಾವಲಿ, ಮೊದಲಾದ ಸಂಸ್ಕೃತ ಸುಭಾಷಿತ ಗ್ರಂಥಗಳಲ್ಲಿಯೂ ಅಲಂಕಾರಶಾಸ್ತ್ರ ಗ್ರಂಥ ಗಳಲ್ಲಿಯೂ ಸುಮಾರು ೩೨ ಜನ ಸಂಸ್ಕೃತ ಕವಯಿತ್ರಿಯರ ಬಿಡಿ ಪದ್ಯಗಳು ಉಲ್ಲಿಖಿತವಾಗಿವೆ. ೪ ಜನ ಸಂಸ್ಕೃತ ಕವಯಿತ್ರಿಯರ ಸಂಪೂರ್ಣ ಕೃತಿಗಳು ಉಪಲಬ್ಧವಾಗಿವೆ.

ಬಿಡಿಪದ್ಯಗಳನ್ನು ಬರೆದ ಕವಯಿತ್ರಿಯರಲ್ಲಿ ಶೀಲಾಭಟ್ಟಾರಿಕಾ, ಗೌರೀ, ಪದ್ಮಾವತೀ, ಭಾವದೇವಿ, ಇಂದುಲೇಖಾ, ತ್ರಿಭುವನ ಸರಸ್ವತೀ, ವಿದ್ಯಾವತೀ, ಸುಭದ್ರಾ ಮೊದಲಾದವರು ಮುಖ್ಯ ರಾಗಿರುವರು. ಕೆಲವು ಕವಯಿತ್ರಿಯರ ಹೆಸರುಗಳು ಅರ್ಥಪೂರ್ಣ ವಾಗಿಯೂ ಮತ್ತೆ ಕೆಲವರವು ವಿನೋದಪೂರ್ಣವಾಗಿಯೂ ಇರು

ವವು. ಓರ್ವಳ ಹೆಸರು ‘ ಸರಸ್ವತೀಕುಟುಂಬದುಹಿತಾ ’ ಸರಸ್ವತಿಯ ಮನೆಯ ಮಗಳು. ಇನ್ನೋರ್ವಳು ‘ ರಸವತೀ ಪ್ರಿಯಂವದಾ ’ ರಸಿಕೆ ಮತ್ತು ನಲ್ಮೆಯ ಮಾತಿನವಳು. ಮೂರನೆ ಯವಳು ‘ ಜಘನಚಪಲಾ ’. ಇವಳು ಜಘನಚಪಲಾ ಎಂಬ ಹೆಸರಿನ ವೃತ್ತದಲ್ಲಿ ಪದ್ಯವನ್ನು ಬರೆದು ಈ ಹೆಸರನ್ನು ಪಡೆದಿರು ವಳು. ಮತ್ತೊಬ್ಬಳು ‘ ವಿಕಟ ನಿತಂಬಾ ’ ತನ್ನ ಪದ್ಯದಲ್ಲಿ ವಿಕಟ ನಿತಂಬಾ ಎಂಬ ಪದವನ್ನು ಪ್ರಯೋಗಿಸಿದ್ದರಿಂದ ಇವಳಿಗೆ ಭವ ಭೂತಿಯಂತೆ ಈ ಹೆಸರು ಬಂದಿದೆ. ಮಧುರವಾಣಿ, ಕಾಮಾಕ್ಷಿ, ಮದಿರೇಕ್ಷಣಾ, ಮದಾಲಸಾ ಎಂಬ ಆಕರ್ಷಕ ಹೆಸರುಗಳೂ ಇನ್ನು ಕೆಲವರಿಗಿವೆ.

ಈ ಕವಯಿತ್ರಿಯರ ಕಾಲ, ದೇಶ, ಮತ್ತು ಜೀವನಚರಿತೆಯನ್ನು ತಿಳಿದುಕೊಳ್ಳಲು ಬಾಹ್ಯಸಾಧನೆಗಳೇನೂ ದೊರೆಯುವದಿಲ್ಲ. ಇವರ ಪದ್ಯಗಳನ್ನು ಉಲ್ಲೇಖಿಸಿರುವ ಸುಭಾಷಿತ ಗ್ರಂಥಗಳ ಮತ್ತು ಅಲಂಕಾರ ಗ್ರಂಥಗಳ ಕಾಲದಿಂದಲೇ ಇವರ ಕಾಲದ ಬಗ್ಗೆ ಸ್ಥೂಲ ವಾದ ಅನುಮಾನಗಳನ್ನು ಮಾಡಬಹುದು. ಬಿಡಿಪದ್ಯಗಳನ್ನು ಬರೆದ ಮೂವತ್ತೆರಡು ಜನ ಕವಯಿತ್ರಿಯರಲ್ಲಿ ಚಂಡಾಲವಿದ್ಯೆ ಯೆಂಬವಳು ಎಲ್ಲಕ್ಕೂ ಪ್ರಾಚೀನಳೆಂದು ತೋರುವದು. ಸದುಕ್ತಿ ಕರ್ಣಾಮೃತದಲ್ಲಿ ಇವಳೂ, ವಿಕ್ರಮಾದಿತ್ಯನೂ, ಕಾಳಿದಾಸನೂ ಕೂಡಿ ಬರೆದ ಬೆಳದಿಂಗಳ ವರ್ಣನೆಯ ಒಂದು ಪದ್ಯವು ದೊರೆಯು ವದು. ಇದರಿಂದ ಇವಳು ಕಾಳಿದಾಸ ಮತ್ತು ವಿಕ್ರಮಾದಿತ್ಯರ ಸಮಕಾಲೀನಳೂ, ನಾಲ್ಕನೆಯ ಶತಮಾನದವಳೂ ಎಂದು ಕಂಡು ಬರುವದು. ಫಲ್ಗುಹಸ್ತಿನಿಯೆಂಬವಳ ಪದ್ಯವನ್ನು ೮ನೆಯ ಶತ ಮಾನದ ವಾಮನನು ತನ್ನ ಕಾವ್ಯಾಲಂಕಾರ ಸೂತ್ರದಲ್ಲಿ ಉಲ್ಲೇಖಿ ಸುವನು. ಆದುದರಿಂದ ಫಲ್ಗುಹಸ್ತಿನಿಯ ಕಾಲವು ೮ನೆಯ

ಶತಕಕ್ಕೆ ಮೊದಲಿನದೆಂದು ಹೇಳಬಹುದು. ಆನಂದವರ್ಧನನ ಧ್ವನ್ಯಾಲೋಕದಲ್ಲಿ ವಿಕಟನಿತಂಬೆಯ 'ಲಾವಣ್ಯಸಿಂಧುರಪರೈವ ಹಿ ಕೇಯಮತ್ರ' ಎಂಬ ಪದ್ಯವು ಬಂದಿರುವದರಿಂದ ೯ನೆಯ ಶತಕವು ಅವಳ ಕಾಲದ ಈಚೆಯ ತುದಿಯೆಂದು ನಿರ್ಣಯಿಸ ಬಹುದು. ೧೦ನೆಯ ಶತಮಾನದ ರಾಜಶೇಖರನು ಶೀಲಾಭಟ್ಟಾರಿಕೆ ಯನ್ನು ಹೊಗಳುವನು. ಸೀತಾ ಎಂಬವಳ ಪದ್ಯವನ್ನು ಉಲ್ಲೇಖಿ ಸುವನು. ತ್ರಿಭುವನ ಸರಸ್ವತಿಯ ಹೆಸರನ್ನೂ ಉಲ್ಲೇಖಿಸುವನು. ಇದೇ ಕಾಲದ ಭೋಜನು ಸರಸ್ವತೀ ಕಂಠಾಭರಣದಲ್ಲಿ ಸರಸ್ವತೀ ಮತ್ತು ಚಿನ್ನಮ್ಮರ ಪದ್ಯಗಳನ್ನು ಉಲ್ಲೇಖಿಸುವನು. ಇದರಿಂದ ಇವರೆಲ್ಲರ ಕಾಲವು ೧೦ನೆಯ ಶತಕಕ್ಕೆ ಪೂರ್ವದ್ದೆಂದು ತಿಳಿದುಬರು ವದು. ಭಾವದೇವಿಯ ಎರಡು ಪದ್ಯಗಳು ೧೧ನೆಯ ಶತಕದ ಕವೀಂದ್ರವಚನ ಸಮುಚ್ಚಯದಲ್ಲಿ ಬಂದಿವೆ. ಜಲ್ಹಣನ ಸೂಕ್ತಿ ಮುಕ್ತಾವಲಿಯಲ್ಲಿ ಮಾರುಲಾ ಮತ್ತು ಮೋರಿಕಾ ಇವರ ಪದ್ಯ ಗಳು ದೊರೆಯುತ್ತವೆ. ಜಲ್ಹಣನು ೧೩ನೆಯ ಶತಕದವನು. ಮದಾಲಸಾ, ನಾಗಮ್ಮಾ, ಸರಸ್ವತೀಕುಟುಂಬದುಹಿತಾ, ರಾಜ ಕನ್ಯಾ, ಲಕ್ಷ್ಮೀ ಇವರ ಪದ್ಯಗಳು ೧೪ನೆಯ ಶತಕದ ಶಾರ್ಙಧರ ಪದ್ಧತಿಯಲ್ಲಿ ದೊರೆಯುತ್ತವೆ. ಗೌರಿ, ಮಧುರವಾಣಿ, ಪದ್ಮಾವತೀ, ಕೇರಲೀ, ವೇಣಿದತ್ತಾ ಇವರೆಲ್ಲ ೧೭ನೆಯ ಶತಮಾನದವರು. ಹೀಗೆ ೪ನೆಯ ಶತಕದಿಂದ ೧೭ನೆಯ ಶತಕದ ವರೆಗಿನ ಸುಮಾರು ೧೩೦೦ ವರ್ಷಗಳ ಕಾಲಾವಧಿಯಲ್ಲಿ ೩೨ ಜನ ಸಂಸ್ಕೃತ ಕವಯಿತ್ರಿ ಯರು ಆಗಿಹೋಗಿರುವರು.

ಇವರು ಭಾರತವರ್ಷದ ಯಾವ ಯಾವ ಭಾಗದಲ್ಲಿ ಜನ್ಮವೆತ್ತಿದ ರೆಂದು ಹೇಳಲು ಯಾವ ಸಾಧನಗಳೂ ಇಲ್ಲ. ಚಿನ್ನಮ್ಮಾ, ನಾಗಮ್ಮಾ, ಕೇರಲೀ ಮೊದಲಾದವರ ಹೆಸರುಗಳು ಮಾತ್ರ ಅವರು ದಕ್ಷಿಣ

ಭಾರತದವರೆಂದು ಸೂಚಿಸುತ್ತವೆ. ಇವರ ಜೀವನಚರಿತೆಯ ವಿಷಯದಲ್ಲಿ ಯಾವ ವಿವರಗಳೂ ತಿಳಿದುಬರುವದಿಲ್ಲ.

ಈ ಕವಯಿತ್ರಿಯರ ಉಪಲಬ್ಧವಿದ್ದ ಕೆಲವೇ ಬಿಡಿ ಪದ್ಯಗಳಿಂದ ಇವರ ಕಾವ್ಯಪ್ರತಿಭೆ ಎಷ್ಟೆಂಬುದನ್ನು ತಿಳಿದುಕೊಳ್ಳಬಹುದು. ದೇವತಾಸ್ತುತಿ, ಮಾನವಸ್ವಭಾವದ ಚಿತ್ರಣ, ಸ್ತ್ರೀಪುರುಷರ ಸೌಂದರ್ಯ ವರ್ಣನೆ, ಪ್ರೇಮ, ವಿರಹ, ಅಸತೀಚರಿತ, ನಿಸರ್ಗವರ್ಣನೆ, ಋತುಗಳು, ಸೂರ್ಯೋದಯ, ಸಂಜೆ, ಬೆಳದಿಂಗಳು, ದೈವ, ಧರ್ಮ ಹೀಗೆ ಸಹೃದಯರಿಗೂ ಕವಿಗಳಿಗೂ ಪ್ರಿಯವಾದ ಅನೇಕ ವಿಷಯಗಳನ್ನು ಕುರಿತು ಪದ್ಯಗಳನ್ನು ಬರೆದಿದ್ದಾರೆ. ವಿಷಯಗಳ ಆಯ್ಕೆಯು ಸಾಂಪ್ರದಾಯಿಕವಾಗಿ ಕಂಡರೂ ನಿರೂಪಣೆಯಲ್ಲಿ ನಾವೀನ್ಯವಿದೆ. ಹೆಣ್ಣುಹೃದಯದ ವೈಶಿಷ್ಟ್ಯವು ಒಡೆದು ಕಾಣುತ್ತದೆ. ಮಾನವ ಸ್ವಭಾವವನ್ನು ತಿಳಿದುಕೊಳ್ಳುವಲ್ಲಿ ಹೆಣ್ಣುಮಕ್ಕಳಿಗಿರುವ ಸೂಕ್ಷ್ಮ ದೃಷ್ಟಿ, ನಿಸರ್ಗವನ್ನು ವರ್ಣಿಸುವಾಗ ವ್ಯಕ್ತವಾಗುವ ಭಾವನೆಗಳ ಕೋಮಲತೆ, ಶೃಂಗಾರ ಚಿತ್ರಣದಲ್ಲಿ ಮೂಡಿಬರುವ ಆಶೆ, ವಿರಹ ನಿವೇದನೆಯಲ್ಲಿಯ ವೇದನೆ, ಅಸತೀಚರಿತ ಕಥನದಲ್ಲಿ ಕಾಣುವ ಕುಚೇಷ್ಟೆ ಓದುಗರ ಮನಸ್ಸನ್ನು ಸೆರೆ ಹಿಡಿಯುತ್ತವೆ. ಪುರುಷರು ಸ್ತ್ರೀಯರ ಸೌಂದರ್ಯವನ್ನು ವರ್ಣಿಸುವ ಸಂದರ್ಭಗಳು ಸಂಸ್ಕೃತ ಸಾಹಿತ್ಯದಲ್ಲಿ ವಿಪುಲವಾಗಿವೆ. ಆದರೆ ಸ್ತ್ರೀಯರು ಪುರುಷರ ಸೌಂದರ್ಯವನ್ನು ವರ್ಣಿಸುವ ಒಂದೆರಡೇ ಸಂದರ್ಭಗಳು ತುಂಬ ಸರಸವಾಗಿವೆ. ದೇವತಾಸ್ತುತಿಯಲ್ಲಿ ಕಂಡುಬರುವ ಗಾಂಭೀರ್ಯವೂ ದೈವ ಧರ್ಮಗಳಲ್ಲಿಯ ಶ್ರದ್ಧೆಯೂ ಭಾರತೀಯ ಮಹಿಳೆಯರ ಪರಂಪರೆಗೆ ಒಪ್ಪುವಂತಹವಾಗಿವೆ. ಹೀಗೆ ಕೆಲವೇ ಪದ್ಯಗಳಲ್ಲಿಯೇ ತಮ್ಮ ಬಹುಮುಖವಾದ ಪ್ರತಿಭೆಯನ್ನು ಬಿಟ್ಟುಹೋಗಿರುವ ನಮ್ಮ ಕವಯಿತ್ರಿಯರ ಕೃತಿಗಳಲ್ಲಿಯ ಕೆಲವನ್ನು ನಾವು ನೋಡುವಾ—

ಪದ್ಮಾವತಿ ಎಂಬ ಕವಯಿತ್ರಿಯು ಸೂರ್ಯೋದಯವನ್ನು ಹೀಗೆ ವರ್ಣಿಸುವಳು :—

ಪ್ರಭಾತವೇಲಾ ಸ್ಮರರಾಜಪುತ್ರೀ ।
ನೀರಾಜನಾ ಭಾಜನಪರ್ಕಬಿಂಬಮ್ ॥
ಆಯಾತಿ ನೀರಾಜಿತುಮಬ್ಧಿಪುತ್ರೀಮ್ ।
ಪಾಣೌ ಗೃಹಿತ್ವಾಂಕುರಿತಾಂಶುಮಾಲಮ್ ॥

" ಪ್ರಭಾತ ವೇಳೆಯೆಂಬ ರಾಜಕನ್ನಿಕೆಯು ಎಳೆಕಿರಣಗಳಿಂದ ತುಂಬಿದ ಸೂರ್ಯಬಿಂಬವೆಂಬ ನೀಲಾಂಜನವನ್ನು ಹಿಡಿದುಕೊಂಡು ಸಮುದ್ರ ಕನ್ನಿಕೆಗೆ ಆರತಿ ಬೆಳಗಲು ಬರುತ್ತಿರುವಳು". ಸೂರ್ಯೋದಯದ ಈ ರೂಪಕವು ಸ್ತ್ರೀಹೃದಯದ ಒಲವನ್ನು ಎತ್ತಿ ತೋರಿಸುತ್ತದೆ.

ಇಂದುಲೇಖೆಯೆಂಬ ಕವಯಿತ್ರಿಯು ಸೂರ್ಯನು ಎಲ್ಲಿ ಮುಳುಗುವನು ಎಂಬ ಪ್ರಶ್ನೆಗೆ ಹೀಗೆ ಉತ್ತರ ಕೊಡುವಳು :—

ಏಕೇ ವಾರಿನಿಧೌ ಪ್ರವೇಶಮಪರೇ ಲೋಕಾಂತರಾಲೋಕನಮ್ ।
ಕೇಚಿತ್ ಪಾವಕಯೋಗಿತಾಮ್ ನಿಜಗದುಃ ಕ್ಷೀಣೇಽಹ್ನಿ ಚಂಡಾರ್ಚಿಷಃ ॥
ಮಿಥ್ಯಾ ಚೈತದಸಾಕ್ಷಿಕಮ್ ಪ್ರಿಯಸಖಿ ಪ್ರತ್ಯಕ್ಷತೀವ್ರಾತಪಮ್ ।
ಮನ್ಯೇಹಮ್ ಪುನರಧ್ವನೀನರಮಣೀಚೇತೋಧಿಶೇತೇ ರವಿಃ ॥

" ಕೆಲವರು ಸೂರ್ಯನು ಸಮುದ್ರವನ್ನು ಪ್ರವೇಶಿಸುವನು ಎಂದು ಹೇಳುವರು. ಮತ್ತೆ ಕೆಲವರು ಇನ್ನೊಂದು ಜಗತ್ತನ್ನು ಬೆಳಗಲು ಹೋಗುವನು ಎನ್ನುವರು. ಹಗಲು ಕಳೆದಾಗ ಆ ಚಂಡಕಿರಣನು ಅಗ್ನಿಯಲ್ಲಿ ಸೇರಿಕೊಳ್ಳುವನೆಂದು ಬೇರೆ ಕೆಲವರು ಹೇಳುವರು. ಇದೆಲ್ಲವೂ ಸುಳ್ಳು; ಇದೆಲ್ಲವನ್ನು ಯಾರೂ ಕಂಡಿಲ್ಲ. ಯಾರ ಪತಿಯು ಪ್ರವಾಸಕ್ಕೆ ತೆರಳಿರುವನೋ ಅಂಥ ಸತಿಯರ ಹೃದಯವನ್ನು ಅವನು ಸೇರಿರುವನೆಂದು ನನ್ನ ಅಭಿಪ್ರಾಯ." ಅಲ್ಲಿ ತಾಪವು

ಪ್ರತ್ಯಕ್ಷವೂ ತೀವ್ರವೂ ಆಗಿರುವದು. ಹೆಣ್ಣುಹೃದಯದ ವೇದನೆಯನ್ನು ಹೆಣ್ಣುಹೃದಯವೇ ಚನ್ನಾಗಿ ಚಿತ್ರಿಸಬಲ್ಲದು. ವಿರಹವೇದನೆಯನ್ನು ಇದಕ್ಕೂ ಚನ್ನಾಗಿ ಚಿತ್ರಿಸಬಹುದೇ ?

ಚಂಡಾಲ ವಿದ್ಯೆಯೆಂಬ ಇನ್ನೊರ್ವ ಕವಯಿತ್ರಿಯು ಹಾಲು ಚೆಲ್ಲಿದಂತೆ ಬಿದ್ದ ಬೆಳದಿಂಗಳನ್ನು ಕಂಡು ಹಗಲಿನ ಕಾರ್ಯಗಳಿಂದ ದಣಿದ ಜಗತ್ತು ಕ್ಷೀರಸಾಗರದಲ್ಲಿ ಮುಳುಗಿದೆ ಎಂದು ಉತ್ಪ್ರೇಕ್ಷಿಸುವಳು.

ಸಂಸ್ಕೃತ ಕವಯಿತ್ರಿಯರ ಉಪಲಬ್ಧವಿದ್ದ ಪದ್ಯಗಳಲ್ಲಿ ಬಹುಸಂಖ್ಯ ಪದ್ಯಗಳು ಶೃಂಗಾರದ ಪದ್ಯಗಳು. ಶೃಂಗಾರದ ವಿವಿಧ ಅಂಗಗಳಾದ ದರ್ಶನ, ಪ್ರೇಮಾಂಕುರ, ವಿರಹ, ಮಾನ, ಕಲಹ ಮೊದಲಾದವು ಸೊಗಸಾಗಿ ಚಿತ್ರಿತವಾಗಿವೆ.

ಭಾವದೇವಿ ಎಂಬ ಕವಯಿತ್ರಿಯು ಪತಿಯ ಪ್ರೇಮದ ಝುರಿಯು ಕುಂಠಿತವಾಗುತ್ತ ನಡೆದ ಓರ್ವ ಮಾನಿನಿಯ ಉದ್ವೇಗವನ್ನು ಸೊಗಸಾಗಿ ವರ್ಣಿಸಿದ್ದಾಳೆ.

**ತಥಾಭೂದಸ್ಮಾಕಮ್ ಪ್ರಥಮಮವಿಭಿನ್ನಾ ತನುರಿಯಮ್ ।**
**ತತೋನು ತ್ವಮ್ ಪ್ರೇಯಾನಹಮಪಿ ಹತಾಶಾ ಪ್ರಿಯತಮಾ ॥**
**ಇದಾನೀಮ್ ನಾಥಸ್ತ್ವಮ್ ವಯಮಪಿ ಕಲತ್ರಮ್ ಕಿಮಪರಮ್ ।**
**ಮಯಾಪ್ತಮ್ ಪ್ರಾಣಾನಾಮ್ ಕುಲಿಶ ಕಠಿನಾನಾಮ ್ ಫಲಮಿದಮ್॥**

‘ ಮೊದಲು ನಮ್ಮಿಬ್ಬರ ದೇಹವು ಒಂದೇ ಆಗಿತ್ತು. ಬಳಿಕ ನೀನು ಪ್ರಿಯಕರನಾದಿ, ಈ ದುರ್ದೈವಿಯಾದ ನಾನು ಪ್ರಿಯತಮೆಯಾದೆ. ಈಗ ನೀನು ನಾಥನು ನಾನು ಹೆಂಡತಿ ಹೆಚ್ಚೇನು ! ವಜ್ರಕ್ಕಿಂತ ಕಠಿಣವಾದ ಈ ಪ್ರಾಣಗಳ ಫಲವು ನನಗೆ ದೊರೆತಂತಾಯಿತು ’. ಪರಸ್ಪರರನ್ನು ಒಂದುಗೂಡಿಸಿದ ಪ್ರೇಮವು ಕ್ರಮೇಣ ಶಿಥಿಲವಾಗುತ್ತ ನಡೆದು ಕೇವಲ ಪತಿ-ಪತ್ನಿ ಭಾವ ಸಂಬಂಧವುಳಿದ

ಈ ಚಿತ್ರವು ಹೆಣ್ಣಿನ ಹೃದಯದ ಕಹಿ ಅನುಭವದ ಸುಂದರ ನಿರೂಪಣೆಯಾಗಿದೆ.

ಬಿಲ್ಹಣನೂ ರಾಜಕನ್ಯೆಯೂ ಕೂಡಿ ಬರೆದ ಇನ್ನೊಂದು ಪದ್ಯದಲ್ಲಿ ಪರಸ್ಪರರ ಹೃದಯವು ಒಂದಾದ, ಆದರೆ ದರ್ಶನ ಸಮಾಗಮಗಳಿನ್ನೂ ಒದಗಿ ಬರದ ಪ್ರೇಮಿಗಳ ಕೊರಗು ಸೊಗಸಾಗಿ ಚಿತ್ರಿತವಾಗಿದೆ.

**ನಿರರ್ಥಕಮ್ ಜನ್ಮ ಗತಮ್ ನಲಿನ್ಯಾ ।**
**ಯಯಾ ನ ದೃಷ್ಟಮ್ ತುಹಿನಾಂಶುಬಿಂಬಮ್ ॥**

ಚಂದ್ರ ಬಿಂಬವನ್ನು ನೋಡದ ನಲಿನಿಯ ಜನ್ಮ ವ್ಯರ್ಥ ಎಂದು ರಾಜಕನ್ಯೆ ತನ್ನ ಹೃದಯವನ್ನು ತೋಡಿಕೊಂಡರೆ,

**ಉತ್ಪತ್ತಿರಿಂದೋರಪಿ ನಿಷ್ಫಲೈವ ।**
**ಕೃತಾ ವಿನಿದ್ರಾ ನಲಿನೀ ನ ಯೇನ ॥**

ನಲಿನಿಯನ್ನು ಅರಳಿಸದ ಚಂದ್ರನ ಉದಯವೂ ನಿರರ್ಥಕವೆಂದು ಬಿಲ್ಹಣನು ತನ್ನ ನಿರಾಶೆಯನ್ನು ವ್ಯಕ್ತಪಡಿಸುವನು.

ಅನುರೂಪಿಗಳಾದ ಸ್ತ್ರೀಪುರುಷರು ಪರಸ್ಪರ ಪ್ರೇಮಭಾವ ತಾಳದಿದ್ದುದನ್ನು ಕಂಡು ಲಕ್ಷ್ಮೀಯೆಂಬ ಕವಯಿತ್ರಿಯು ಪರಸ್ಪರಾಕರ್ಷಣೆಗೆ ಅಜ್ಞಾತವಾದ ಈಶ್ವರೇಚ್ಛೆಯೇ ಕಾರಣವಾಗಿದೆಯೇ ಹೊರತು ಕೇವಲ ಅನುರೂಪ ರೂಪ ಯೌವನಗಳಲ್ಲವೆಂಬ ಪ್ರೇಮ ಸಿದ್ಧಾಂತವನ್ನು ಮಾರ್ಮಿಕವಾಗಿ ಪ್ರತಿಪಾದಿಸಿದ್ದಾಳೆ.

**ಭ್ರಮನ್ ವನಾಂತೇ ನವಮಂಜರೀಷು ।**
**ನ ಷಟ್ಪದೋ ಗಂಧಫಲೀಮಜಿಘ್ರತ್ ॥**
**ಸಾ ಕಿಮ್ ನ ರಮ್ಯಾ ಸ ಚ ಕಿಮ್ ನ ರಂತಾ ।**
**ಬಲೀಯಸೀ ಕೇವಲಮೀಶ್ವರೇಚ್ಛಾ ॥**

ಅಡವಿಯಲ್ಲಿ ನವಮಂಜರಿಗಳನ್ನು ಅರಸುತ್ತ ತಿರುಗುವ

ಭ್ರಮರವು ಸಂಪಿಗೆಯನ್ನು ಮೂಸಲಿಲ್ಲ ಸಂಪಿಗೆ ಸುಂದರವಲ್ಲವೆ ? ಭ್ರಮರವು ರಸಿಕನಲ್ಲವೇ ? ಆದರೆ ಈಶ್ವರೇಚ್ಛೆಯು ಬಲವತ್ತರವಾಗಿದೆ. ಈ ಪದ್ಯವು ಕಾಲಿದಾಸನ

" ನಾಸೌ ನ ಕಾಮ್ಯಾ ನಚ ವೇದ ಸಮ್ಯಗ್
ದ್ರಷ್ಟುಮ್ ನ ಸಾ ಭಿನ್ನರುಚಿರ್ಹಿ ಲೋಕಃ "

ಎಂಬ ಮಾತನ್ನು ನೆನಪಿಗೆ ತರುತ್ತದೆ. ಪರಿಣತಮತಿ ಕಾಲಿದಾಸನು ಜನರ ಅಭಿರುಚಿಯು ಭಿನ್ನವಾಗಿರುತ್ತದೆ ಎಂದು ಹೇಳಿದರೆ ನಮ್ಮ ಕವಯಿತ್ರಿಯು ತಪ್ಪನ್ನು ಈಶ್ವರನ ತಲೆಗೆ ಕಟ್ಟುತ್ತಾಳೆ.

ಅಭಿಜಾತ ಪ್ರೇಮವನ್ನು ಕುರಿತು ಹಾಡುವ ಸಂಸ್ಕೃತ ಕವಿಗಳು ಆಗಾಗ ಕುಲಟೆಯರ ಪ್ರೇಮದ ವ್ಯವಹಾರಗಳನ್ನು ಕೂಡ ಚಿತ್ರಿಸುವರು. ಅಸತಿಯರ ವರ್ತನೆಯನ್ನು ಹೆಣ್ಣುಮಕ್ಕಳೇ ಹೇಗೆ ಚಿತ್ರಿಸುವರೆಂದು ತಿಳಿದುಕೊಳ್ಳುವದರಲ್ಲಿ ಕುತೂಹಲವಿರುವದು ಸಹಜ. ಅಸತಿಯರ ವರ್ತನೆಯನ್ನು ಚಾತುರ್ಯದಿಂದ ವರ್ಣಿಸುವ ಕವಿಗಳಾಗಲೀ ಕವಯಿತ್ರಿಯರಾಗಲೀ ಅದಕ್ಕೆ ತಮ್ಮ ನೈತಿಕ ಬೆಂಬಲವನ್ನು ಕೊಡುತ್ತಾರೆ ಎಂದು ಅರ್ಥವಲ್ಲ. ಮಾನವನ ವರ್ತನೆಯ ಎಲ್ಲಬದಿಗಳನ್ನು ಚಿತ್ರಿಸಲು ಹೊರಟ ಅವರು ಇದನ್ನೂ ಚಿತ್ರಿಸುವರು. ಅದರ ಗುಣದೋಷಗಳನ್ನು ಅರಿತುಕೊಂಡು ವರ್ತಿಸುವ ಹೊಣೆ ಸಹೃದಯ ವಾಚಕರನ್ನು ಕೂಡಿದೆ. ಕವಯಿತ್ರಿಯರ ಕಲ್ಪನಾ ಚಾತುರ್ಯವನ್ನು ನೋಡುವ ದೃಷ್ಟಿಯಿಂದ ಇಲ್ಲಿ ಅಸತೀ ಚರಿತೆಯ ಕೆಳಗಿನ ಪದ್ಯವನ್ನು ನೋಡಬಹುದು.

**ಅಕಾರೇಣ ಶಶೀ ಗಿರಾ ಪರಭೃತಃ ಪಾರಾವತಶ್ಚುಂಬನೇ |**
**ಹಂಸಶ್ಚಂಕ್ರಮಣೇ ಸಮಮ್ ದಯಿತಯಾ ರತ್ಯಾಮ್ ವಿಮರ್ದೇ ಗಜಃ ||**

ಇತ್ಥಮ್ ಭರ್ತರಿ ಮೇ ಸಮಸ್ತಯುವತಿಶ್ಲಾಘ್ಯೈರ್ಗುಣೈಃ ಕಿಂಚನ।
ನ್ಯೂನಮ್ ನಾಸ್ತಿ ಪರಮ್ ವಿವಾಹಿತ ಇತಿ ಸ್ಯಾನ್ನೈಕ ದೋಷೋ-
ಯದಿ ॥

"ನನ್ನ ಪತಿಯು ನೋಡಲು ಚಂದ್ರ, ಮಾತಿನಲ್ಲಿ ಕೋಗಿಲೆ, ಚುಂಬಿಸಲು ಪಾರಿವಾಳ, ನಡಿಗೆಯಲ್ಲಿ ಹಂಸ, ರತಿಯಲ್ಲಿ ಆನೆ ಹೀಗೆ ಯುವತಿಯರಿಗೆ ಶ್ಲಾಘ್ಯವಾದ ಎಲ್ಲ ಗುಣಗಳು ಇರುವವು. ವಿವಾಹಿತನಾದ ಪತಿ ಎಂಬುದೇ ಒಂದು ನ್ಯೂನತೆ."

ಒಂದು ರೀತಿಯಿಂದ ಇದು ಕುಲಟೆಯರ ನಿಂದೆಯೇ ಆಗಿದೆ, ವೈವಾಹಿಕ ಜೀವನವು ಹೊರಿಸುವ ಹೊಣೆ ಮತ್ತು ಗಾಂಭೀರ್ಯ ಅವರಿಗೆ ಬೇಡವಾದ ವಿಷಯ. ವೈವಾಹಿಕ ಜೀವನದ ಚೌಕಟ್ಟಿನಲ್ಲಿ ಎಂಥ ಸುಂದರ ಪತಿಯಿದ್ದರೂ ಅವರಿಗೆ ಸುಖವಿಲ್ಲ. ಇಂಥ ವಿಪರ್ಯಸ್ತ ಮನೋವೃತ್ತಿಯ ಕುಲಟೆಯರ ಜೀವನದ ಅಂದಗೇಡಿತನವನ್ನು ಎತ್ತಿ ತೋರಿಸುವದೇ ಕವಯಿತ್ರಿ ಮಧುರವರ್ಣೆಯ ಉದ್ದೇಶವಾಗಿರಬೇಕು.

ನಿಸರ್ಗವರ್ಣನೆ ಮತ್ತು ಶೃಂಗಾರರಸ ಪರಿಪೋಷಣೆಯಲ್ಲಿ ಮಾತ್ರವಲ್ಲದೇ ಮಾನವ ಸ್ವಭಾವ ಚಿತ್ರಣದಲ್ಲಿಯೂ ಲೋಕಾನುಭವವನ್ನು ನಿರೂಪಿಸುವದರಲ್ಲಿಯೂ ಈ ಕವಯಿತ್ರಿಯರು ತಮ್ಮ ಕೌಶಲ್ಯವನ್ನು ತೋರಿಸಿದ್ದಾರೆ.

ಸ್ವಭಾವಸಿದ್ಧಮ್ ವಕ್ರತ್ವಮ್ ಖಲಸ್ಯ ಚ ಹಲಸ್ಯ ಚ ।
ಮುಖಾಕ್ಷೇಪಮ್ ತಯೋಃ ರೋಧುಮುಲಮೇಕೈವ ಸಾ ಕ್ಷಮಾ ॥

'ದುರ್ಜನರ ಸ್ವಭಾವವೂ ನೇಗಿಲವೂ ವಕ್ರವಾಗಿರುವದು ಸಹಜ ಸಿದ್ಧ. ನೇಗಿಲದ ತುದಿ ಕೊರೆಯುವವನ್ನು ಕ್ಷಮೆ (ನೆಲ) ಯೇ ತಡೆದುಕೊಳ್ಳಬಲ್ಲದು. ದುರ್ಜನರ ಬಿರುಸು ಬಾಯನ್ನು ಕ್ಷಮಾ ಗುಣವೇ ತಡೆದುಕೊಳ್ಳಬಲ್ಲದು' ಎಂದು ಪದ್ಮಾವತಿಯು

ಹೇಳುವಳು. ಇಲ್ಲಿ ಕವಯಿತ್ರಿಯ ಅನುಭವವೂ, ನಿರೂಪಣೆಯ ಜಾಣ್ಮೆಯೂ ಒಡೆದು ಕಾಣುತ್ತವೆ.

ಶೀಲಾ ಭಟ್ಟಾರಿಕೆಯು ಕೃತಘ್ನನನ್ನು ಜನರು ನಂಬುವದಿಲ್ಲ ವೆಂಬುದನ್ನು ಕಾವ್ಯಮಯವಾಗಿ ಹೀಗೆ ಹೇಳುತ್ತಾಳೆ :

**ಪ್ರಿಯಾ ವಿರಹಿತಸ್ಯಾಸ್ಯ ಹೃದಿ ಚಿಂತಾ ಸಮಾಗತಾ ।**
**ಇತಿ ಮತ್ವಾ ಗತಾ ನಿದ್ರಾ ಕೇ ಕೃತಘ್ನಮುಪಾಸತೇ ॥**

'ಪ್ರಿಯೆ ಅಗಲಿದೊಡನೆ ಇವನ ಹೃದಯದಲ್ಲಿ ಚಿಂತೆ ಬಂದು ಸೇರಿದಳು ಎಂದು ನಿದ್ರೆ ಹೊರಟುಹೋದಳು. ಕೃತಘ್ನನನ್ನು ಯಾರು ನಂಬುವರು.'

ಮದಾಲಸೆ ಎಂಬ ಕವಯಿತ್ರಿಯು ನಮಗೆ ಪರದೃಷ್ಟಿಯುಳ್ಳವ ರಾಗಿರೆಂದು ತುಸು ಉಪದೇಶ ಮಾಡಿದ್ದಾಳೆ.

**ಪರಲೋಕಹಿತಮ್ ತಾತ ಪ್ರಾತರುತ್ಥಾಯ ಚಿಂತಯ ।**
**ಇಹ ತೇ ಕರ್ಮಣಾಮೇವ ವಿಪಾಕಶ್ಚಿಂತಯಿಷ್ಯತಿ ॥**

"ನಿನ್ನ ಇಲ್ಲಿಯ ಚಿಂತೆಯನ್ನು ನಿನ್ನ ಹಿಂದಿನ ಕರ್ಮಫಲವೇ ಮಾಡುವದು. ಪ್ರಾತಃಕಾಲದಲ್ಲಿ ತುಸು ಮುಂದಿನ ಚಿಂತೆಯನ್ನು ಮಾಡು." ಕವಯಿತ್ರಿಯ ಹೆಸರು ಆಲಸೆಯಾದರೂ ಅವಳು ನಮ್ಮನ್ನು ಬಹುದೂರದ ವಿಚಾರ ಮಾಡಲು ಹಚ್ಚಿದ್ದಾಳೆ.

ಬಿಡಿ ಪದ್ಯಗಳನ್ನು ಬರೆದ ಸಂಸ್ಕೃತ ಕವಯಿತ್ರಿಯರ ಕೃತಿಗಳ ಈ ವಿಮರ್ಶೆಯನ್ನು ವಿದ್ಯಾವತಿಯ ಗೌರೀ ಸ್ತುತಿಯ ಕೆಳಗಿನ ಪದ್ಯದಿಂದ ಮಂಗಲ ಮಾಡಬಹುದು.

**ಯಸ್ಯಾಃ ಪ್ರೀತ್ಯರ್ಥ ಮನಿಶಮ್ ಲಾಸ್ಯಮ್ ಕುರ್ವನ್ ಶಿವೋ ಬಭೌ ।**
**ನಮಸ್ತಸ್ಯೈ ಸುಮೀನಾಕ್ಷ್ಯೈ ದೇವ್ಯೈ ಮಂಗಲಮೂರ್ತಯೇ ॥**

ಯಾರ ಪ್ರೀತಿಗಾಗಿ ಶಿವನು ಯಾವಾಗಲೂ ನೃತ್ಯಮಾಡುತ್ತ ಶೋಭಿಸಿದನೋ ಆ ಮಂಗಲಮೂರ್ತಿ ಮೀನಾಕ್ಷಿಗೆ ನಮಸ್ಕಾರವು.

—— o ——

# ವಿಜಯಾಂಬಿಕೆ

ಮೂವತ್ತೆರಡು ಜನ ಬಿಡಿ ಪದ್ಯಗಳನ್ನು ಬರೆದ ಕವಯಿತ್ರಿಯ ರಲ್ಲದೆ ನಾಲ್ವರು ಪೂರ್ಣಕೃತಿಗಳನ್ನು ಬರೆದ ಕವಯಿತ್ರಿಯರಿರುವರು. ಇವರಲ್ಲಿ 'ಕೌಮುದೀ ಮಹೋತ್ಸವ' ಎಂಬ ನಾಟಕವನ್ನು ಬರೆದ ವಿಜ್ಜಿಕೆ ಅಥವಾ ವಿಜಯಾಂಬಿಕೆಯು ಪ್ರಾಚೀನಳೆಂದು ತೋರು ವದು. ವಿಜ್ಜಿಕೆಯ ಕಾಲ, ದೇಶ, ವ್ಯಕ್ತಿತ್ವದ ವಿಷಯ ವಾಗಿಯೂ ಕೌಮುದೀಮಹೋತ್ಸವ ನಾಟಕದ ವಿಷಯವಾಗಿಯೂ ವಿದ್ವಾಂಸರು ಭಿನ್ನಭಿನ್ನವಾದ ಅಭಿಪ್ರಾಯಗಳನ್ನು ವ್ಯಕ್ತಪಡಿಸಿರು ವರು. ಇವುಗಳಲ್ಲಿ ಇಂಥ ಅಭಿಪ್ರಾಯವು ಹೆಚ್ಚು ಸಮರ್ಪಕ ವೆಂದು ಹೇಳಬಹುದಾದಂಥ ಬಲವತ್ತರವಾದ ಪ್ರಮಾಣವು ಈ ವರೆಗೆ ಮುಂದೆ ಬಂದಿಲ್ಲವಾದ್ದರಿಂದ ಆ ನಿರ್ಣಯವನ್ನು ಮುಂದಿನ ಸಂಶೋಧನೆಗೆ ಬಿಟ್ಟುಕೊಡಬೇಕಾಗಿದೆ.

ಸರಸ್ವತೀವ ಕರ್ಣಾಟೀ ವಿಜಯಾಂಕಾ ಜಯತ್ಯಸೌ ।
ಯಾ ವೈದರ್ಭಗಿರಾಮ್ ವಾಸಃ ಕಾಲಿದಾಸಾದನಂತರಮ್ ॥

"ಕಾಲಿದಾಸನ ನಂತರ ವೈದರ್ಭೀ ರೀತಿಯಲ್ಲಿ ಬರೆಯುವ ವಿಜಯಾಂಬಿಕೆಯು ಸರಸ್ವತಿಯಂತೆ ವಿರಾಜಿಸುವಳು" ಎಂದು ೧೦ನೆಯ ಶತಕದ ರಾಜಶೇಖರನು ಇವಳನ್ನು ಹೊಗಳುವನು. ಇದರಿಂದ ಇವಳು ಕರ್ಣಾಟಕ ದೇಶದವಳೂ ರಾಜಶೇಖರನಿಗಿಂತ ಪ್ರಾಚೀನಳೂ ವೈದರ್ಭೀ ರೀತಿಯಲ್ಲಿ ಬರೆಯುವದರಲ್ಲಿ ನಿಪುಣಳೂ ಎಂದು ತಿಳಿದುಬರುತ್ತದೆ.

ನೀಲೋತ್ಪಲದಲಶ್ಯಾಮಾಮ್ ವಿಜ್ಜಿಕಾಮ್ ಮಾಮಜಾನತಾ ।
ವೃಥೈವ ದಂಡಿನಾ ಪ್ರೋಕ್ತಾ ಸರ್ವ ಶುಕ್ಲಾ ಸರಸ್ವತೀ ॥

"ನೀಲಕಮಲದ ದಳಗಳಂತೆ ಕಪ್ಪಾಗಿರುವ ವಿಜ್ಜಿಕೆಯನ್ನರಿಯದೆ ದಂಡಿಯು ಸರಸ್ವತಿ ಬೆಳ್ಳಗಿರುವಳೆಂದು ಹೇಳಿರುವನು" ಎಂಬ ಒಂದು ಪದ್ಯವು ವಿಜ್ಜಿಕೆಯು ಬರೆದ ಪದ್ಯವೆಂದು ಪ್ರಸಿದ್ಧವಿದೆ. ರಾಜಶೇಖರನ ಪದ್ಯದಲ್ಲಿಯೂ ಈ ಪದ್ಯದಲ್ಲಿಯೂ ವಿಜಯಾಂಬಿಕೆ ಹಾಗೂ ವಿಜ್ಜಿಕೆಯರನ್ನು ಸರಸ್ವತಿಗೆ ಹೋಲಿಸಿರುವದನ್ನು ನೋಡಿದರೆ ಅವೆರಡೂ ಒಬ್ಬಳೇ ಕವಯಿತ್ರಿಯ ಹೆಸರಿರಬೇಕೆಂದು ಸ್ಪಷ್ಟವಾಗುವದು. ಅಲ್ಲದೇ ಈ ಕವಯಿತ್ರಿಯು ದಂಡಿಯ ಸಮಕಾಲೀನಳಾಗಲೀ ತುಸು ಈಚಿನವಳಾಗಲೀ ಇರಬೇಕೆಂಬ ಊಹೆಗೂ ಅವಕಾಶವಾಗುವದು. ದಂಡಿಯ ಕಾಲ ೭ನೆಯ ಶತಮಾನ.

**ಏಕೋಽಭೂತ್ ನಲಿನಾತ್ ತತಶ್ಚ ಪುಲಿನಾತ್ ವಲ್ಮೀಕತಶ್ಚಾಪರಃ ।**
**ತೇ ಸರ್ವೇ ಕವಯಃ ಪ್ರಸನ್ನಮತಯಃ ತೇಭ್ಯೋ ಮಹದ್ಭ್ಯೋ ನಮಃ॥**
**ಅರ್ವಾಂಚೋ ಯದಿ ಗದ್ಯಪದ್ಯರಚನಾ ಚಾತುರ್ಯಮಾತನ್ವತೇ ।**
**ತೇಷಾಮ್ ಮೂರ್ಧ್ನಿ ದದಾಮಿ ವಾಮಚರಣಮ್ ಕರ್ಣಾಟ**
**ರಾಜಪ್ರಿಯಾ ॥**

"ಕಮಲದಿಂದ ಹುಟ್ಟಿದ ಬ್ರಹ್ಮ, ನದಿಯ ದಂಡೆಯ ಮರಳಿನಲ್ಲಿ ಹುಟ್ಟಿದ ವ್ಯಾಸ, ಹುತ್ತಿನಿಂದ ಹುಟ್ಟಿದ ವಾಲ್ಮೀಕಿ ಈ ಮೂವರು ಪ್ರಸನ್ನಮತಿಗಳಾದ ಕವಿಗಳು. ಆ ಮಹನೀಯರಿಗೆ ನಮಸ್ಕಾರ. ಆದರೆ ಈಗಿನವರು ಯಾರಾದರೂ ಗದ್ಯಪದ್ಯವನ್ನು ರಚಿಸುವ ಚಾತುರ್ಯವನ್ನು ತೋರಿಸಹೋದರೆ ಕರ್ಣಾಟರಾಜಪ್ರಿಯೆಯಾದ ನಾನು ಅವರ ತಲೆಯ ಮೇಲೆ ನನ್ನ ಎಡಗಾಲನ್ನು ಇಡುವೆನು." ಎಂಬ ಒಂದು ಪದ್ಯವು ಪ್ರಚಲಿತವಿದೆ. ಇದು ನಿಂದೆಯಂತೆ ಕಂಡರೂ ಅನ್ವಯಭೇದದಿಂದ ವರ್ಣನೆಯೂ ಆಗಿದೆ.

'ತೇಷಾಮ್ ಮೂರ್ಧ್ನಿ' ಎಂದು ಅನ್ವಯ ಹೊಂದಿಸುವದರ ಬದಲು 'ತೇಷಾಮ್ ವಾಮ-ಚರಣಮ್' ಎಂದು ಹೊಂದಿಸಿದರೆ ಈಗಿನವರು ಯಾರಾದರೂ ಗದ್ಯಪದ್ಯವನ್ನು ರಚಿಸುವ ಚಾತುರ್ಯ ವನ್ನು ತೋರಿಸಿದರೆ ಅವರ ಎಡಗಾಲನ್ನು ಕರ್ಣಾಟಕ ರಾಜಪ್ರಿಯೆ ನಾನು ತಲೆಯ ಮೇಲಿಟ್ಟುಕೊಳ್ಳುವೆನೆಂದರ್ಥವಾಗುವದು. ಇಲ್ಲಿ ವ್ಯಂಗ್ಯವಾಗಿ ಸ್ತುತಿಸಲ್ಪಟ್ಟ ಕವಿಯು ದಂಡಿಯೇ ಆಗಿರಬೇಕು. ಗದ್ಯ ಮತ್ತು ಪದ್ಯಗಳನ್ನು ಬರೆದವನು ದಂಡಿಯೇ ಅಲ್ಲದೆ ವ್ಯಾಸ ಮತ್ತು ವಾಲ್ಮೀಕಿಗಳ ಸಾಲಿನಲ್ಲಿಟ್ಟು ಹೊಗಳಿಸಿಕೊಳ್ಳುವವನು ದಂಡಿಯೇ ಎಂದು,

> **ಜಾತೇ ಜಗತಿ ವಲ್ಮೀಕೌ ಶಬ್ದಃ ಕವಿರಿತಿ ಸ್ಮೃತಃ ।**
> **ಕವೀ ಇತಿ ತತೋ ವ್ಯಾಸೇ ಕವಯಶ್ಚೇತಿ ದಂಡಿನಿ ॥**

ಎಂಬ ಪದ್ಯದಿಂದ ತಿಳಿದು ಬರುತ್ತದೆ. ಇನ್ನು ಈ ದಂಡಿಯನ್ನು ವ್ಯಂಗ್ಯವಾಗಿ ಹೊಗಳುವ ಕರ್ಣಾಟರಾಜಪ್ರಿಯೆಯು ವಿಜ್ಜಿಕೆಯೇ ಆಗಿರಬೇಕು. ಯಾಕಂದರೆ ದಂಡಿಗೂ ವಿಜ್ಜಿಕೆಗೂ ಸ್ನೇಹದ ಜಗಳ ವಾಗುತ್ತಿದ್ದುದನ್ನು "ನೀಲೋತ್ಪಲದಲಶ್ಯಾಮಾಮ್" ಎಂಬ ಪದ್ಯದಲ್ಲಿ ಈಗಾಗಲೇ ನೋಡಿದ್ದೇವೆ.

ಈ ವರೆಗಿನ ವಿವೇಚನೆಯಿಂದ ವಿಜಯಾಂಬಿಕೆ ಅಥವಾ ವಿಜ್ಜಿ ಕೆಯು, ದಂಡಿ ಮತ್ತು ರಾಜಶೇಖರರ ನಡುವಿನ ಕಾಲದಲ್ಲಿ ಅಂದರೆ ೭ ಮತ್ತು ೧೦ನೆಯ ಶತಮಾನಗಳ ಮಧ್ಯದಲ್ಲಿ ಆಗಿಹೋದಳೆಂದೂ ಕರ್ಣಾಟಕದ ರಾಜಮನೆತನಕ್ಕೆ ಸೇರಿದವಳೆಂದೂ ಸ್ಪಷ್ಟವಾಗುವದು.

ವಿಜ್ಜಿಕೆಯವೆಂದು ಪ್ರಸಿದ್ಧವಾದ ಪದ್ಯಗಳಲ್ಲಿ ಒಂದು ಪದ್ಯವು ಭಾರವಿಯ (೬ನೆಯ ಶತಕ) ಒಂದು ಪದ್ಯದ ಅನುಕರಣೆಯಂತಿದೆ. ವಿಜ್ಜಿಕೆಯ ಪದ್ಯಗಳನ್ನು ಮುಕುಲಭಟ್ಟ (೯ನೆಯ ಶತಕ)

ಮಮ್ಮಟ, ಭೋಜ ( ೧೧ನೆಯ ಶತಕ ) ವಿಶ್ವನಾಥ ( ೧೩ನೆಯ ಶತಕ ) ಮೊದಲಾದವರು ಉಲ್ಲೇಖಿಸುವರು. ಇದರಿಂದಲೂ ಮೇಲೆ ನಿರ್ದೇಶಿಸಿದ ಕಾಲವೇ ಅವಳ ಕಾಲವಾಗಿರಬೇಕೆಂದು ದೃಢಪಡುವದು.

ವಿಜ್ಜಿಕೆಯದೆಂದು ಹೇಳಲಾಗುವ ' ಕೌಮುದೀ ಮಹೋತ್ಸವ ' ಎಂಬ ನಾಟಕದ ಹಸ್ತಪ್ರತಿಯನ್ನು ಶ್ರೀ ರಾಮಕೃಷ್ಣ ಕವಿಗಳು ಕೇರಲ ದೇಶದಲ್ಲಿ ದೊರಕಿಸಿ ಈಗ ೨೫ ವರ್ಷಗಳ ಹಿಂದೆ ಮುದ್ರಿಸಿರುವರು. ನಾಟಕದ ಪ್ರಸ್ತಾವನೆಯಲ್ಲಿ ನಾಟಕಕರ್ತೃವಿನ ಹೆಸರಿದ್ದ ಭಾಗವು ಹಸ್ತಪ್ರತಿಯಲ್ಲಿ ಹುಳತಿಂದು ಹೋಗಿ " ಕಯಾ ನಿಬದ್ಧಮ್ " ಎಂದಿಷ್ಟು ಮಾತ್ರ ಕಾಣುತ್ತಿತ್ತೆಂದು ಸಂಪಾದಕರು ಹೇಳುವರು. ಇದರಿಂದ ಈ ಕೃತಿಯು ಹೆಣ್ಣುಮಗಳದು ಎಂದಿಷ್ಟು ಮಾತ್ರ ಹೇಳಬಹುದಲ್ಲದೇ ಅವಳು ಯಾರು ಎಂದು ಹೇಳಲಾಗುವದಿಲ್ಲ. ಸಂಪಾದಕರು ಅದನ್ನು ' ವಿಜ್ಜಿಕಯಾ ' ಎಂದು ಹೊಂದಿಸಿರುವರು. ಸೂಕ್ಷ್ಮವಾಗಿ ಅದನ್ನು ನೋಡಿದರೆ ಒತ್ತಕ್ಷರದ ' ಜ ' ಕಾಣುತ್ತಿದೆ ಎಂದು ಸಂಪಾದಕರು ಹೇಳುವರು. ಶ್ರೀ ಕೆ. ಪಿ. ಜಯಸ್ವಾಲರೊಬ್ಬರನ್ನು ಬಿಟ್ಟರೆ ಉಳಿದೆಲ್ಲ ವಿದ್ವಾಂಸರು ಸಂಪಾದಕರ ಈ ಊಹೆಯನ್ನು ಒಪ್ಪಿದ್ದಾರೆ. ಮುಂದೆ ನಾಟಕದಲ್ಲಿ " ಜಯತಿ ಪ್ರಥಮಮ್ ವಿಜಯಾ " ಎಂಬ ಪದ್ಯದಲ್ಲಿ ಶ್ಲೇಷದಿಂದ ನಾಟಕಕಾರಳ ಹೆಸರನ್ನು ಸೂಚಿಸಿದೆಯೆನ್ನುವದು ಸಮಂಜಸವಾಗಿ ಕಾಣುತ್ತದೆ. ಹೀಗೆ ನಾಟಕಕಾರಳು ವಿಜ್ಜಿಕೆ ಎಂಬ ನಿರ್ಣಯಕ್ಕೆ ನಾವು ಬಂದರೂ ರಾಜಶೇಖರನು ಹೊಗಳಿದ ವಿಜ್ಜಿಕೆ ಅಥವಾ ವಿಜಯಾಂಬಿಕೆಗೂ ಈ ವಿಜ್ಜಿಕೆಗೂ ಸಂಬಂಧವನ್ನು ಕಲ್ಪಿಸಲು ಸಾಕಷ್ಟು ಸಾಧನಗಳು ಉಪಲಬ್ಧವಿಲ್ಲ. ಸುಭಾಷಿತಗಳಲ್ಲಿ ವಿಜ್ಜಿಕೆಯವೆಂದು ಪ್ರಸಿದ್ಧವಾದ ಯಾವದೇ ಪದ್ಯವು ನಾಟಕದಲ್ಲಿ ದೊರೆಯುವ

ದಿಲ್ಲ. ನಾಟಕದಲ್ಲಿಯ ಯಾವದೇ ಪದ್ಯವನ್ನು ಅಲಂಕಾರಿಕ ರಾಗಲೀ, ಸುಭಾಷಿತಕಾರರಾಗಲೀ ಉದಾಹರಿಸುವದಿಲ್ಲ. ನಾಟಕದ ಕಾಲವನ್ನು ಸ್ವತಂತ್ರವಾಗಿ ನಿರ್ಧರಿಸಲೂ ಸಾಕಷ್ಟು ಪ್ರಮಾಣ ಗಳಿಲ್ಲ. ಆದರೆ ನಾಟಕದ ಮಂಗಲ ಪದ್ಯದಲ್ಲಿ ಶ್ರೀ ಶಂಕರಾಚಾರ್ಯರ ಸ್ತುತಿಯಿದ್ದಂತೆ ಭಾಸವಾಗುತ್ತದೆ. ಇದು ಈಶ್ವರನ ಸ್ತುತಿಯಾಗಿದ್ದರೂ "ನಾನಾತ್ವಗ್ರಂಥಿಭೇತ್ರೀಮ್" "ಬ್ರಹ್ಮ ವ್ಯಾಖ್ಯಾನ ನಿಷ್ಠ" ಎಂಬ ಪದಗಳಿಂದ ಈಶ್ವರಾವತಾರರೆಂದು ಪ್ರಸಿದ್ಧರಾದ ಶ್ರೀ ಶಂಕರಾಚಾರ್ಯರ ಸ್ತುತಿಯಂತೆಯೇ ಭಾಸವಾಗುತ್ತದೆ. ನಾಟಕದ ರಚನೆಯ ಕಾಲಕ್ಕೆ ಅದ್ವೈತ ಮತವು ಪ್ರಚಲಿತ ವಿತ್ತೆಂದು ಹೇಳಲಂತೂ ಯಾವ ಬಾಧಕವೂ ಇಲ್ಲ. ಶ್ರೀ ಶಂಕರಾ ಚಾರ್ಯರ ಕಾಲ ೮ನೆಯ ಶತಮಾನ ಆದುದರಿಂದ ನಾಟಕದ ಕಾಲವು ೮ನೆಯ ಶತಮಾನದಿಂದೀಚೆಗೆ ಎಂದಿಷ್ಟು ಮಾತ್ರ ಹೇಳಬಹುದು. ಇದರಿಂದ ಮೇಲೆ ವಿವೇಚಿಸಿದಂತೆ ವಿಜ್ಜಿಕೆಯ ಕಾಲಾವಧಿಯಾದ ೭ ಮತ್ತು ೧೦ನೆಯ ಶತಕದ ಪರಿಮಿತಿಯಲ್ಲಿ ನಾಟಕದ ಕಾಲವನ್ನು ಹೊಂದಿಸಬಹುದೆಂಬುದನ್ನು ಮಾತ್ರ ಗಮನಿಸ ಬಹುದು.

ಈ ವಿಜ್ಜಿಕೆ ಅಥವಾ ವಿಜಯಾಂಬಿಕೆಯು ಕರ್ಣಾಟಕದವಳೂ ರಾಜಮನೆತನದವಳೂ ಎಂಬುದು ನಿಶ್ಚಿತವಾಗಿ ಕಂಡರೂ ಯಾವ ರಾಜಮನೆತನಕ್ಕೆ ಸೇರಿದವಳು ಎಂದು ನಿರ್ಧರಿಸುವದು ದುಷ್ಕರ ವಾಗಿದೆ. ಕರ್ನಾಟಕದಲ್ಲಿ ಆಳಿದ ರಾಜಮನೆತನಗಳಲ್ಲಿ (೧) ಚಾಲುಕ್ಯ ಮನೆತನದ ಮೂಲಸಂಸ್ಥಾಪಕ ವಿಷ್ಣುವರ್ಧನನ ತಾಯಿ, ವಿಜಯಾದಿತ್ಯನ ಹೆಂಡತಿ ವಿಜಯಾ ಎಂಬವಳೊಬ್ಬಳಿರುವದು ಕಂಡುಬರುವದು. (೨) ಪೂರ್ವ ಚಾಲುಕ್ಯ ಮನೆತನದಲ್ಲಿಯ ವಿಜಯಾದಿತ್ಯನೆಂಬ ಇನ್ನೊಬ್ಬನ ಹೆಂಡತಿ ವಿಜಯಾಮಹಾದೇವಿ

ಎಂಬವಳೊಬ್ಬಳಿದ್ದುದು ಪೀಠಪುರ ಶಾಸನದಲ್ಲಿಯ

**ಏತೇಷು ವಿಜಯಾದಿತ್ಯೋ ಸೂರ್ಯಾನ್ವಯ ಸಮುದ್ಭವಾಮ್ ।**
**ಉಪಯೇಮೇಥ ವಿಜಯಾಮ್ ಮಹಾದೇವೀಮ್ ಮಹೀ-**
**ಸಮಾಮ್ ॥**

ಎಂಬ ಪದ್ಯದಿಂದ ತಿಳಿದುಬರುತ್ತದೆ. (೩) ಬಾದಾಮಿಯ ಚಾಲುಕ್ಯಮನೆತನದಲ್ಲಿ ಎರಡನೆಯ ಪುಲಿಕೇಶಿಯ ಸೊಸೆ ಚಂದ್ರಾದಿತ್ಯನ ಹೆಂಡತಿ ವಿಜಯಾ ಎಂಬವಳಿರುವದು ನೆರೂರು ಶಾಸನದಿಂದ ತಿಳಿದುಬರುತ್ತದೆ. (೪) ನೃಪತುಂಗನ ಸೇನಾಪತಿ ಬಂಕೇಶನೆಂಬವನ ಹೆಂಡತಿ ವಿಜಯಾ ಎಂಬವಳಿದ್ದಳೆಂದೂ ಅವಳು ಸಂಸ್ಕೃತ ಕವಯಿತ್ರಿಯಾಗಿದ್ದಳೆಂದೂ ಕರ್ನಾಟಕ ಗತವೈಭವಕಾರರು ಹೇಳುತ್ತಾರೆ. ಈ ನಾಲ್ವರಲ್ಲಿ ನಮ್ಮ ಕವಯಿತ್ರಿ ಯಾರು ಎಂದು ಹೇಳುವದು ಕಠಿಣ. ಚಾಲುಕ್ಯ ಮನೆತನದ ಮೂಲಪುರುಷನೆಂದು ಹೇಳಲಾಗುವ ವಿಷ್ಣುವರ್ಧನನ ವಿಷಯದಲ್ಲಿ ಪ್ರಚಲಿತವಿದ್ದ ಕಥೆಯು ಇನ್ನೂ ಕೇವಲ ಕಥೆಯಾಗಿದ್ದು ಐತಿಹಾಸಿಕ ದೃಷ್ಟಿಯಿಂದ ಅವನ ಕಾಲ ಮೊದಲಾದವುಗಳಾಗಲೀ ಆ ಕಥೆಯ ಸತ್ಯತೆಯಾಗಲೀ ನಿರ್ಣೀತವಾಗಿಲ್ಲ. ಬಾದಾಮಿ ಚಾಲುಕ್ಯ ಮನೆತನದ ಇತಿಹಾಸವು ಜಯಸಿಂಹನಿಂದಲೂ ಪೂರ್ವ ಚಾಲುಕ್ಯ ಮನೆತನದ ಇತಿಹಾಸವು ವಿಷ್ಣುವರ್ಧನನಿಂದಲೂ ಪ್ರಾರಂಭವಾಗುವದು. ಆದುದರಿಂದ ಚಾಲುಕ್ಯ ಮನೆತನದ, ಇತಿಹಾಸಕ್ಕೆ ನಿಲುಕದ ಸಂಸ್ಥಾಪಕ ವಿಷ್ಣುವರ್ಧನನ ತಾಯಿ ವಿಜಯಾ ಎಂಬವಳೇ ಸಂಸ್ಕೃತ ಕವಯಿತ್ರಿ ವಿಜ್ಜಿಕಾ ಎಂಬ ಸೂಚನೆಯನ್ನು ಒಪ್ಪುವದು ಕಠಿಣ. ಅಲ್ಲದೆ ಆ ಕಾಲವು ದಂಡಿಗಿಂತ ಈಚಿನ ಕಾಲವಾಗಲಾರದು. ಪೀಠಪುರ ಶಾಸನದಲ್ಲಿ ಉಲ್ಲೇಖಿಸಿದ ವಿಜಯ

ಮಹಾದೇವಿಯ ಕಾಲವು ೧೨ನೆಯ ಶತಮಾನವಾಗಿದ್ದು ಸಂಸ್ಕೃತ ಕವಯಿತ್ರಿ ವಿಜ್ಜಿಕೆಯ ಕಾಲವನ್ನು ಅಷ್ಟು ಮುಂದಕ್ಕೆ ಹಾಕುವದೂ ೯–೧೦ ಶತಮಾನಗಳಲ್ಲಿಯೇ ಅವಳ ಉಲ್ಲೇಖ ಬಂದಿರುವದರಿಂದ ಸಾಧ್ಯವಾಗಲಾರದು. ಇನ್ನುಳಿದ ಎರಡನೆಯ ಪುಲಕೇಶಿಯ ಸೊಸೆ ಚಂದ್ರಾದಿತ್ಯನ ಹೆಂಡತಿ ವಿಜ್ಜಿಕೆಯಾಗಿರಬೇಕೆಂಬ ಅಭಿಪ್ರಾಯವು ತುಂಬಾ ಸ್ವಾಗತಾರ್ಹವಾದರೂ ಅದನ್ನು ಒಪ್ಪಿಕೊಳ್ಳಲು ಕೆಲವು ತೊಂದರೆಗಳಿವೆ. ಚಂದ್ರಾದಿತ್ಯನ ಕಾಲ ೭ನೆಯ ಶತಮಾನ. ನಾಟಕದಲ್ಲಿ ಶಂಕರಾಚಾರ್ಯರ ಸ್ತುತಿಯಿರುವದರಿಂದ ಅದರ ಕಾಲವನ್ನು ೮ನೆಯ ಶತಮಾನಕ್ಕಿಂತ ಹಿಂದಕ್ಕೆ ಹಾಕಲು ಬರುವ ದಿಲ್ಲ. ನಾಟಕದ ವಿಷಯವನ್ನು ತುಸು ಹೊತ್ತು ಬದಿಗಿಟ್ಟರೂ ವಿಜ್ಜಿಕೆಯ ಇನ್ನಿತರ ಪದ್ಯಗಳೂ ೯ನೆಯ ಶತಕದ ವರೆಗಿನ ಗ್ರಂಥ ಗಳಲ್ಲಿ ಉದಾಹೃತವಾಗಿಲ್ಲ. ಇಷ್ಟೊಂದು ಸರಸಳಾದ ಕವಯಿತ್ರಿಯ ಪದ್ಯಗಳನ್ನು ಸುಮಾರು ಎರಡುನೂರು ವರ್ಷ ಕಾಲ ಯಾರೂ ಉದಾಹರಿಸದಿರುವದಕ್ಕೆ ಕಾರಣವನ್ನು ಹೇಳುವದು ಕಠಿಣ. ಆದುದರಿಂದ ಕವಯಿತ್ರಿಯ ಕಾಲಾವಧಿಯನ್ನು ೭ರಿಂದ ೧೦ರ ವರೆಗೆಂದು ಸ್ಥೂಲವಾಗಿ ಹೇಳಿದ್ದರೂ ೮-೯ ಶತಕಗಳ ಮಧ್ಯಕ್ಕೆ ಅದನ್ನು ಪರಿಮಿತಗೊಳಿಸುವದು ಹೆಚ್ಚು ಸಮಂಜಸವಾಗಿ ಕಾಣು ವದು. ಮತ್ತು ಹೀಗೆ ಮಾಡಿದ ಪಕ್ಷದಲ್ಲಿ ಪುಲಕೇಶಿಯ ಸೊಸೆ ವಿಜಯಭಟ್ಟಾರಿಕೆ ನಮ್ಮ ಕವಯಿತ್ರಿಯಿರಬೇಕೆಂಬ ಊಹೆಯು ಸಂಶಯಾಸ್ಪದವಾಗುವದು. ಕೊನೆಯದಾಗಿ ನೃಪತುಂಗನ ಸೇನಾ ಪತಿ ಬಂಕೇಶನ ಹೆಂಡತಿ ಎಂಬವಳು ವಿಜ್ಜಿಕೆ ಎಂದರೆ, ನೃಪತುಂಗ ೯ನೆಯ ಶತಕದವನಾದುದರಿಂದ ಕಾಲದ ತೊಂದರೆಯೇನಿಲ್ಲ ದಿದ್ದರೂ ಅವಳನ್ನು "ಕರ್ಣಾಟರಾಜಪ್ರಿಯಾ" ಎಂದು ಸಂಬೋಧಿಸುವದು ಯೋಗ್ಯವಾದೀತೇ ಎಂಬುದು ವಿಚಾರಾರ್ಹ

ವಾದ ವಿಷಯ. ಹೀಗೆ ಈ ನಾಲ್ವರಲ್ಲಿ ಯಾರೊಡನೆ ಹೊಂದಿಸು ವದೂ ಕಠಿಣವಾಗಿರುವದರಿಂದ ಬಲವತ್ತರ ಪ್ರಮಾಣವು ದೊರೆ ಯುವತನಕ ಈ ವಿಷಯವನ್ನು ಇತ್ಯರ್ಥ ಮಾಡದೇ ಬಿಡುವದೇ ಯೋಗ್ಯವೆಂದು ಕಾಣುವದು.

ವಿಜ್ಜಿಕೆಯ ಕೃತಿ "ಕೌಮುದಿ ಮಹೋತ್ಸವ"ವು ಐದಂಕಗಳ ಚಿಕ್ಕ ಐತಿಹಾಸಿಕ ನಾಟಕ.

ವಿರಸಾಪಿ ಕೃತಿಃ ಪ್ರಪತ್ಸ್ಯತೇ
ಮಧುನಿಷ್ಯಂದಮಯೀಮ್ ದಶಾಂತರಾಮ್ ।
ಯದಿ ನಾಮ ಸತಾಮನುಗ್ರಹಃ
ಶಿಶಿರಃ ಪ್ರಾಪ್ಯ ರವೇರಿವಾತಪಮ್ ॥

ಕೃತಿಯು ವಿರಸವಾಗಿದ್ದರೂ ಸಹೃದಯ ವಾಚಕರ ಅನುಗ್ರಹ ವಿದ್ದರೆ ಚಳಿಗಾಲದಲ್ಲಿಯ ಬಿಸಿಲಿನಂತೆ ಸುಖಕರವಾಗಿಯೇ ಪರಿ ಣಮಿಸುವದು ಎಂದು ವಿನಯದಿಂದಲೇ ಕವಯಿತ್ರಿಯು ನಾಟಕ ವನ್ನು ಆರಂಭಿಸುವಳು.

ಪಾಟಲೀಪುತ್ರದಲ್ಲಿ ಸುಂದರವರ್ಮನೆಂಬ ರಾಜನಿದ್ದನು. ಅವನ ಆಶ್ರಯದಿಂದಲೇ ದೊಡ್ಡವನಾದ ಚಂಡಸೇನನೆಂಬ ಸೇನಾಪತಿಯು ಮಗಧಕುಲ ವೈರಿಗಳಾದ ಲಿಚ್ಛವಿಗಳೊಡನೆ ಸೇರಿಕೊಂಡು ರಾಜ ಧಾನಿಯನ್ನು ಆಕ್ರಮಿಸುವನು. ಆರಂಭದೆಶೆಯಲ್ಲಿ ಯುದ್ಧವು ರಾಜನಿಗೆ ಅನುಕೂಲವಾಗಿ ಕಂಡರೂ ಕೊನೆಯ ಗಳಿಗೆಯಲ್ಲಿ ರಾಜನು ಸಾಯುವನು. ಮಂತ್ರಿ ಮಂತ್ರಗುಪ್ತನು ರಾಜಕುಮಾರ ಕಲ್ಯಾಣವರ್ಮನನ್ನು ವಿಂಧ್ಯಪರ್ವತದಲ್ಲಿ ಗುಪ್ತವಾಗಿಟ್ಟು ರಾಜ್ಯ ವನ್ನು ತಿರುಗಿ ಪಡೆಯಲು ನೀತಿಜಾಲವನ್ನು ಹರಡುವನು. ಕಲ್ಯಾಣ ವರ್ಮನು ಕುಂಜರಕನೆಂಬ ಸೇನಾಪತಿಯ ನಿರೀಕ್ಷಣೆಯಲ್ಲಿ ದೊಡ್ಡ ವನಾಗುವನು. ಮಥುರೆಯ ಅಧಿಪತಿ ಕೀರ್ತಿಷೇಣನು ಕೀರ್ತಿ

ಮತಿ ಎಂಬ ತನ್ನ ಮಗಳನ್ನು ವಿಂಧ್ಯವಾಸಿನೀ ದೇವಿಯ ಸೇವೆಗಾಗಿ ವಿಂಧ್ಯಾಟವಿಗೆ ಕಳಿಸುವನು. ಅಲ್ಲಿ ಕಲ್ಯಾಣವರ್ಮನಿಗೂ ದೇವಸ್ಥಾನದಿಂದ ಹಿಂದಿರುಗಿ ಬರುವ ಕೀರ್ತಿಮತಿಗೂ ಆದ ಪ್ರಥಮ ದರ್ಶನ ಮತ್ತು ಪ್ರೇಮಾಂಕುರಗಳೇ ನಾಟಕದ ಮೊದಲನೆಯ ಅಂಕಿನ ವಿಷಯವಾಗಿವೆ. ಪ್ರಥಮ ದರ್ಶನದ ರೀತಿಯು ಸಾಮಾನ್ಯ ವಾಗಿ ಕಾಲಿದಾಸನ ರೀತಿಯನ್ನು ಹೋಲುತ್ತಿದ್ದರೂ ಕವಯಿತ್ರಿಯು ನಾಯಿಕೆಯ ಭಾವವನ್ನು ಚಿತ್ರಿಸುವದರಲ್ಲಿ ತನ್ನ ಕೌಶಲ್ಯವನ್ನು ತೋರಿಸಿರುವಳು. ನಾಯಕನು ತಾನು ಪಾಟಲೀಪುತ್ರದಲ್ಲಿ ಇನ್ನೂ ಚಿಕ್ಕವನಾಗಿರುವ ಕಾಲದಲ್ಲಿಯ ಪರಿಸ್ಥಿತಿ ಮತ್ತು ತನ್ನ ಇಂದಿನ ಪರಿಸ್ಥಿತಿಯನ್ನು ಚಿಂತಿಸುತ್ತ ಒಂದು ಅಶೋಕವೃಕ್ಷದ ಬದಿಯಲ್ಲಿ ಕುಳಿತಾಗ ಬಲಭುಜ ಹಾರುವದು. ಮರುಕ್ಷಣದಲ್ಲಿಯೇ ಪೈಜಣ ಗಳ ಮಧುರ ಶಬ್ದವು ಕೇಳಬರುವದು. ಆ ಶಬ್ದವು ಬರುವ ದಿಶೆ ಯಲ್ಲಿ ದೃಷ್ಟಿಯನ್ನು ಹೊರಳಿಸಿದಾಗ ಅಸಾಧರಣ ಸೌಂದರ್ಯ ವುಳ್ಳ ಯುವತಿಯೋರ್ವಳು ದೃಷ್ಟಿಗೆ ಬೀಳುವಳು. ಅನುಪಮ ಸೌಂದರ್ಯವುಳ್ಳ ಅವಳ ಶರೀರವು ಬ್ರಹ್ಮಸೃಷ್ಟಿಯಾಗಿರಲಾರದು. ಶಂಕರನನ್ನು ಜಯಿಸಲು ಮದನನು ಮಾಡಿದ ತಪಸ್ಸಿನ ಫಲವೇ ಅವಳಿರಬೇಕೆಂದು ತರ್ಕಿಸುವನು. ಉತ್ತಮಸ್ತ್ರೀಲಕ್ಷಣವೇ ರೂಪತಾಳಿ ಬಂದಂತೆ ತೋರುವದು. " ನವವಧೂರೇಷಾ ವಘೂ ಲಕ್ಷಣಮ್ " ಎಂದು ಉದ್ಗಾರ ತೆಗೆಯುವನು. ಅಲ್ಲಿದ್ದ ರಾಜ ಕುಮಾರನನ್ನು ನೋಡಿ ರಾಜಕುಮಾರಿಯೂ ಚಕಿತಳಾಗುವಳು. ಅವಳೊಡನೆ ವೃದ್ಧ ಕಂಚುಕಿಯೂ ನಿಪುಣೆಯೆಂಬ ದಾಸಿಯೂ ಇರುವರು. ಕಲ್ಯಾಣವರ್ಮನು ತಾನು ಮೊದಲೇ ಅಲ್ಲಿದ್ದನೆಂಬ ಹಕ್ಕಿನಿಂದ ಅವರನ್ನು ಅತಿಥಿಗಳೆಂದು ಬರಮಾಡಿಕೊಳ್ಳುವನು. ಕೀರ್ತಿಮತಿಯ ಕುಲಗೋತ್ರಗಳನ್ನೂ, ಅಲ್ಲಿಗೆ ಬಂದ ಕಾರಣವನ್ನೂ

ನೇರವಾಗಿಯೇ ಕಂಚುಕಿಯನ್ನು ಕೇಳುವನು. ಅಡವಿಯಲ್ಲಿ ಆ ಕೋಮಲೆಯನ್ನು ವೃತಾಚರಣೆಗಾಗಿ ಕಳಿಸಿದ್ದು ಅಯುಕ್ತವೆಂದು ಸಾರುವನು. ಈ ಔಪಚಾರಿಕ ಸಂಭಾಷಣೆಯ ಮಧ್ಯದಲ್ಲಿ ನಾಯಕ-ನಾಯಿಕೆಯರು ಪರಸ್ಪರ ದರ್ಶನಲಾಭ ಪಡೆಯುವರು. "ಜನ ಪ್ರತಿಷಿದ್ಧಪ್ರಸರಾಪಿ ಪುನಃಪುನಸ್ತತ್ರೈವ ದೃಷ್ಟಿಃ ಪ್ರಸರತಿ." ಜನರಿರುವದರಿಂದ ತಡೆದುಕೊಂಡರೂ ನನ್ನ ದೃಷ್ಟಿಯು ಮತ್ತೆ ಮತ್ತೆ ಅವನ ಕಡೆಗೇ ಹರಿಯುತ್ತದೆ ಎಂದು (ಸ್ವಗತದಲ್ಲಿ) ಹೇಳಿ ಕೀರ್ತಿಮತಿ ಪ್ರೇಕ್ಷಕರಿಗೆ ತನ್ನ ಗುಟ್ಟನ್ನು ರಟ್ಟು ಮಾಡುತ್ತಾಳೆ. ವಿಶ್ರಾಂತಿಗಾಗಿ ಕುಟೀರವೊಂದನ್ನು ರಚಿಸಲು ಕಳಿಸಿದ ಸಿಂಹಲಕನು ಕರೆಯಲು ಬಂದಾಗ ಅವರು ಅಗಲಬೇಕಾಗುತ್ತದೆ. ನಾಯಿಕೆಯು ಅಗಲು ವಾಗ ತನ್ನ ಕಟಾಕ್ಷಗಳಿಂದ ನಾಯಕನ ಹೃದಯವನ್ನು ಎತ್ತಿ ಕೊಂಡು ತನ್ನ ಹೃದಯವನ್ನು ಅವನಲ್ಲಿಟ್ಟು ಹೋಗುವಳೋ ಎಂಬಂತೆ ನಾಯಕನಿಗೆ ಭಾಸವಾಗುವದು.

ಯಾತಾ ನಿತಂಬಗುರ್ವೀ
ಯಾವದ್ಯಾವನ್ಮೃಗೇಕ್ಷಣಾ ದೂರಮ್ ॥
ಬಿಂಬಿತಗಾತ್ರೀ ಮಾಂತಃ
ತಾವತ್ತಾವದವಗಾಢಾ ಮೇ ॥

"ಕನ್ನಡಿಯಲ್ಲಿಯ ಪ್ರತಿಬಿಂಬದಂತೆ ಅವಳು ದೂರ ದೂರ ಹೋದಷ್ಟೂ ನನ್ನಲ್ಲಿ ಆಳವಾಗಿ ಸೇರಿಕೊಂಡಳು" ಎಂದು ಕಲ್ಯಾಣ ವರ್ಮನು ತನ್ನ ಚಿತ್ತದಲ್ಲಿ ಅವಳು ಗಾಢವಾಗಿ ಸೇರಿಕೊಂಡದ್ದನ್ನು ಸ್ವಾರಸ್ಯವಾಗಿ ಹೇಳುವನು. ನಾಯಕನಿಗೆ ತನ್ನ ಹೃದಯವನ್ನು ತೋಡಿಕೊಳ್ಳಲು ಒಬ್ಬರು ಬೇಕಾಗಿರುವ ವೇಳೆಗೆ ಸರಿಯಾಗಿ ವಿದೂಷಕನು ಅಲ್ಲಿಗೆ ಬರುವನು. ರಾಜಕುಮಾರನು ಓರ್ವ ಯುವತಿಯ ಮೋಹಕ್ಕೆ ಬಿದ್ದಿರುವನು ಎಂದು ತಿಳಿದು ವಿದೂಷ

ಕನು "ಅಂಧಸ್ಯ ಕೂಪಪತನಮ್ ಸಂವೃತ್ತಮ್ ಪೂರ್ವಮ್ ರಾಜ್ಯನಾಶಃ ತತಃ ಸ್ತ್ರೀ ತಂತುನಾ ಬಂಧನಮ್" ಇದು ಕುರುಡನು ಭಾವಿಗೆ ಬಿದ್ದಂತಾಯಿತು. ಈ ಮೊದಲೇ ರಾಜ್ಯವನ್ನು ಕಳೆದು ಕೊಂಡಿರುವಿ ; ಇದೀಗ ಹೆಣ್ಣೆಂಬ ಹಗ್ಗದಿಂದ ಬಿಗಿದುಕೊಳ್ಳು ತ್ತಿರುವಿ ಎಂದು ಹೇಳಿದಾಗ, ಪ್ರೇಮಿಗಳ ಭಾವನೆಗಳನ್ನರಿಯಲಾರದ ಅವನ ಮಾತಿನಿಂದ ಪ್ರೇಕ್ಷಕರು ನಗದಿರಲಾರರು. ಅವಸರದಿಂದ ತಿರುಗಿ ಹೋಗುವಾಗ ಬಳ್ಳಿಗೆ ಸಿಕ್ಕ ಸೆರಗನ್ನು ಬಿಡಿಸಿಕೊಳ್ಳುವ ಭರದಲ್ಲಿ ಕೆಳಗೆ ಬಿದ್ದ ಕೀರ್ತಿಮತಿಯ ಹಾರವು ಆ ಹೊಟ್ಟೆಬಾಕ ವಿದೂಷಕನಿಗೆ ಅನ್ನದ ರಾಶಿಯಂತೆ ಕಂಡರೆ ನಾಯಕನಿಗೆ ತನ ಗಾಗಿ ಬಿಟ್ಟುಹೋದ ಅವಳ ಹೃದಯವೆಂದೇ ಭಾಸವಾಗುವದು. ಪ್ರೀತಿಯಿಂದ ಅದನ್ನು ಎತ್ತಿಕೊಂಡು ನಾಯಕನು ಸೇವಕರ ಸೂಚನೆ ಯಂತೆ ತನ್ನ ದಿನಚರ್ಯೆಗಾಗಿ ಹೊರಡುವನು.

ಎರಡನೆಯ ಅಂಕದಲ್ಲಿ ನಾಯಿಕೆ ಮದನಬಾಧೆಯಿಂದ ಅಸ್ವಸ್ಥಳಾಗುವಳು ನಾಯಕನ ಚಿತ್ರವನ್ನು ಬರೆಯುವಳು. ಶ್ಯೇನ ಪಕ್ಷಿಯೊಂದು ಆ ಚಿತ್ರವನ್ನು ಎತ್ತಿಕೊಂಡು ಹೋಗಿ ಕೀರ್ತಿಮತಿಯ ಸಾಕು ತಾಯಿ ಯೋಗಸಿದ್ಧಿಯಿದ್ದಲ್ಲಿಗೆ ಒಯ್ದು ಒಗೆಯುವದು. ಯೋಗಸಿದ್ಧಿಯು ಈಗ ಸನ್ಯಾಸಿನಿ ; ಮೊದಲು ಅವಳು ಮಗಧದೇಶದ ರಾಜ ಸುಂದರವರ್ಮನ ಅರಮನೆ ಯಲ್ಲಿ ಕೆಲಸಕ್ಕಿದ್ದಳು. ಕಲ್ಯಾಣವರ್ಮನ ದಾಯಿಯಾಗಿ ದ್ದಳು. ಚಂಡಸೇನನು ನಗರವನ್ನು ಆಕ್ರಮಿಸಿದ ನಂತರ, ಕಲ್ಯಾಣವರ್ಮನು ಕಳೆದುಹೋದ ಮೇಲೆ ಜೀವನದಲ್ಲಿ ನಿರಾಶೆ ಯನ್ನು ತಾಳಿ ಸನ್ಯಾಸಿನಿಯಾಗಿ ದೇಶದಿಂದ ದೇಶಕ್ಕೆ ಅಲೆ ಯುತ್ತಿದ್ದಾಗ ಕೀರ್ತಿಮತಿಯ ತಾಯಿಯ ಆಗ್ರಹದಿಂದ ಅವಳ ಅರಮನೆಯಲ್ಲಿದ್ದಳು. ಈಗ ಕೀರ್ತಿಮತಿಯೊಡನೆ ವಿಂಧ್ಯಾಟವಿಗೆ

ಬಂದಿದ್ದಳು. ತನ್ನ ಹತ್ತಿರ ಶ್ಯೇನವು ತಂದೊಗೆದ ಚಿತ್ರವನ್ನು ನೋಡಿ ಅವಳಿಗೆ ಹಿಂದಿನದೆಲ್ಲ ನೆನಪಾಗುವದು. ಆ ಚಿತ್ರದಲ್ಲಿಯ ರಾಜಕುಮಾರನು ತಾನು ಸಾಕಿದ ಕಲ್ಯಾಣವರ್ಮನೇ ಎಂಬು ದನ್ನೂ ತಾನೇ ಸಾಕಿದ ಕೀರ್ತಿಮತಿಗೆ ಅವನಲ್ಲಿ ಪ್ರೇಮ ಉಂಟಾ ಗಿದೆಂಬುದನ್ನೂ ನಿಪುಣಿಕೆಯಿಂದ ತಿಳಿದು ಅವಳಿಗೆ ತುಂಬ ಸಂತೋಷವಾಗುವದು. ಈ ಮುಪ್ಪಿನ ವಯಸ್ಸಿನಲ್ಲಿಯೂ ಕೂಡ ಕಲ್ಯಾಣವರ್ಮನ ನೆನಪಾದೊಡನೆ ಮೊಲೆಹಾಲು ತೊಟಕಿಕ್ಕು ತ್ತದೆ ಎಂಬ ಮಾತಿನಿಂದ ಅವಳ ಸಂತೋಷದ ಆಳವನ್ನು ತಿಳಿದು ಕೊಳ್ಳಬಹುದು. ಹಾರವನ್ನು ತಿರುಗಿ ಕೊಡುವ ನೆವಮಾಡಿ ನಾಯಕನ ಪರವಾಗಿ ಪ್ರೇಮಸಂಧಾನ ಮಾಡಲು ಬಂದ ವಿದೂ ಷಕನು ಮರೆಯಲ್ಲಿ ನಿಂತು ನಿಪುಣಿಕೆ ಯೋಗಸಿದ್ಧಿಯರ ಸಂಭಾ ಷಣೆಯನ್ನು ಕೇಳುತ್ತಿದ್ದವನು ನಾಯಿಕೆಗೆ ಪ್ರೇಮ ಉಂಟಾಗಿರುವ ದನ್ನೂ ಯೋಗಸಿದ್ಧಿಯು ಇವರಿಬ್ಬರನ್ನೂ ಕೂಡಿಸುವದರಲ್ಲಿ ಆಸ್ಥೆ ತಾಳುತ್ತಿರುವದನ್ನೂ ಕಂಡು ಭಿಕ್ಷೆಗೆ ಹೊರಟವನಿಗೆ ಮೃಷ್ಟಾನ್ನ ದೊರೆತಂತಾಯಿತೆಂದು ಹೇಳುತ್ತ ಮುಂದೆ ಬಂದು ಯೋಗಸಿದ್ಧಿಗೆ ನಮಸ್ಕರಿಸುವನು. ವಿದೂಷಕನ ಪಾತ್ರವು ಸಂಸ್ಕೃತ ನಾಟಕ ಗಳಲ್ಲಿ ಹಾಸ್ಯ ಪಾತ್ರ. ವೇಷ ಮತ್ತು ಮಾತಿನಿಂದ ಅವನು ಹಾಸ್ಯವನ್ನುಂಟುಮಾಡಬೇಕೆಂದು ಲಕ್ಷಣಕಾರರು ಹೇಳಿದ್ದಾರೆ. ವಿದೂಷಕನು ರಂಗಕ್ಕೆ ಬಂದೊಡನೆ ಅವನನ್ನು ನೋಡಿ ನಿಪುಣಿಕೆಯು 'ಕ ಏಷ ಆಕೃತ್ಯಾ ಮರ್ಕಟಃ ವಾಚಾ ಗರ್ಧಭಃ' ನೋಡಲು ಮಂಗ ಮಾತನಾಡಿದರೆ ಕತ್ತೆಯಂತಿರುವ ಇವನು ಯಾರು? ಎಂದು ಕೇಳಿದಾಗ ವಿದೂಷಕನ ರೂಪ ನಮ್ಮ ಕಣ್ಣಮುಂದೆ ಸುಲಭವಾಗಿ ಬಂದು ಹೋಗುವದು. ವಿದೂಷಕನ ಸೌಂದರ್ಯದ ಬಗ್ಗೆ ಇಷ್ಟೊಂದು ಉದಾರವಾದ ಅಭಿಪ್ರಾಯ

ವನ್ನಿಟ್ಟುಕೊಂಡ ನಿಪುಣಿಕೆಗೆ ಕೀರ್ತಿ ಮತಿಯು ಕಲ್ಯಾಣವರ್ಮನ ಚಿತ್ರವನ್ನು ಬರೆದಿದ್ದಾಳೆ, ನೀನು ನನ್ನ ಚಿತ್ರವನ್ನು ಬರೆಯಬೇಕೆಂದು ಅವನು ಹೇಳಿದಾಗ ನಗು ತಡೆಯದಾಗುವದು. ಹಾರವನ್ನು ಕೊಟ್ಟು ಚಿತ್ರಪಟವನ್ನು ತೆಗೆದು ಕೊಂಡು ವಿದೂಷಕನು ಮರಳುವನು. ಯೋಗಸಿದ್ಧಿ ಮತ್ತು ನಿಪುಣಿಕೆಯರೂ ಕೂಡ ಪ್ರೇಮಿಗಳನ್ನು ಕೂಡಿಸುವ ಮುಂದಿನ ಯೋಜನೆಗಾಗಿಹೊರಡುವರು.

ಮೂರನೆಯ ಅಂಕದಲ್ಲಿ ನಾಯಕನಿಗೆ ನಾಯಿಕೆ ಬರೆದ ತನ್ನ ಚಿತ್ರವನ್ನು ನೋಡಿ ಉಂಟಾದ ಉತ್ಸಾಹ ತನ್ನ ಸಾಕುತಾಯಿ ಯೋಗಸಿದ್ಧಿಯ ವಿಚಾರವನ್ನು ತಿಳಿದು ಆದ ಆನಂದ ಚಿತ್ರಿತವಾಗಿವೆ.

ನಾಲ್ಕನೆಯ ಅಂಕದಲ್ಲಿ ಪ್ರೇಮದ ಕಥೆಯು ಹಿಂದೆ ಸರಿದು ರಾಜಕೀಯ ಘಟನೆಗಳು ಪ್ರಾಮುಖ್ಯವನ್ನು ಪಡೆಯುತ್ತವೆ. ಕಲ್ಯಾಣವರ್ಮನು ವಿಂಧ್ಯಾಟವಿಯಲ್ಲಿ ದೊಡ್ಡವನಾಗುತ್ತಿರುವದೂ, ಕೀರ್ತಿಮತಿಯ ಸಮಾಗಮವೂ, ಆಕಸ್ಮಿಕಘಟನೆಗಳಾಗಿರದೆ ಮಂತ್ರ ಗುಪ್ತನ ರಾಜಕಾರಣದ ಅಂಗಗಳಾಗಿವೆ. ಶೂಲಪಾಣಿಯ ಸಿದ್ಧಾಯ ತನದಲ್ಲಿ ಆರ್ಯರಕ್ಷಿತನೆಂಬ ಮಂತ್ರಗುಪ್ತನ ಆಪ್ತಸೇವಕನು ಪಾಶುಪತನ ವೇಷದಲ್ಲಿದ್ದು ಕಾರ್ಯ ಮಾಡುತ್ತಿದ್ದನು. ಅಲ್ಲಿಗೆ ವರ್ಧಮಾನನೆಂಬ ಇನ್ನೊಬ್ಬ ಗುಪ್ತಚಾರನೂ ಬರುವನು. ಅವ ರಿಬ್ಬರ ಸಂಭಾಷಣೆಯಿಂದ ಮಂತ್ರಗುಪ್ತನ ಪ್ರಚೋದನೆಯಿಂದ ವಿರುದ್ಧರಾದ ಗಡಿರಕ್ಷಕರನ್ನು ಬಗ್ಗುಬಡೆಯಲು ಚಂಡಸೇನನು ರಾಜಧಾನಿಯನ್ನು ಬಿಟ್ಟು ಹೊರಗೆ ಹೋಗಿರುವದಾಗಿಯೂ, ಈ ಸಂಧಿಯನ್ನು ಸಾಧಿಸಿ ಕಲ್ಯಾಣವರ್ಮನನ್ನು ರಾಜಧಾನಿಗೆ ಕರೆದು ಕೊಂಡು ಹೋಗುವ ಸಿದ್ಧತೆ ನಡೆಯುತ್ತಿರುವದಾಗಿಯೂ ತಿಳಿದು ಬರುವದು. ಚಂಡಸೇನನನ್ನು ಹೊರಗೆ ಕಳಿಸಿರುವದಲ್ಲದೆ ರಾಜ ಕುಮಾರನ ವಿಷಯವಾಗಿ ಜನಾಭಿಪ್ರಾಯವು ತುಂಬ ಅನುಕೂಲ

ವಾಗಿಯೂ ಚಂಡಸೇನನ ವಿಷಯದಲ್ಲಿ ಅತ್ಯಂತ ಪ್ರತಿಕೂಲ ವಾಗಿಯೂ ಆಗುವಂತೆ ಮಂತ್ರಗುಪ್ತನು ಮಾಡಿರುವನು. 'ಶತ್ರೋ ರೇಕಲೋಷ್ಟವಧಮುಪಾಚ್ಯರಿಷ್ಯಂತಿ' ಈಗ ಶತ್ರು ಚಂಡಸೇನ ನನ್ನು ಪ್ರಜೆಗಳು ತಲೆಗೊಂದೊಂದು ಕಲ್ಲು ಒಗೆದು ಕೊಲ್ಲಲೂ ಸಿದ್ಧರಿರುವರು ಎನ್ನುವಷ್ಟು ಜನಾಭಿಪ್ರಾಯವು ಅವನಿಗೆ ಪ್ರತಿ ಕೂಲವಾಗಿರುವದು.

ನಾಲ್ಕನೆಯ ಅಂಕಿನ ಮುಖ್ಯ ದೃಶ್ಯದ ಘಟನೆ ರಾತ್ರಿಯಲ್ಲಿ ನಡೆಯುವದು. ವೀರಸೇನನೆಂಬ ಚಾರನು ರಾತ್ರಿಯಲ್ಲಿ ಮಂತ್ರ ಗುಪ್ತನನ್ನು ಸಂಧಿಸುವನು. ವೀರಸೇನನು ಬಂದೊಡನೆ ಅವನನ್ನು ಕೈಹಿಡಿದು ಬರಮಾಡಿಕೊಳ್ಳುವದೂ, ತನ್ನ ಹಾಸಿಗೆಯ ಮೇಲೆಯೇ ಕುಳಿತುಕೊಳ್ಳಲು ಹೇಳುವದೂ, ಆದರೂ ಅವನು ನೆಲದ ಮೇಲೆ ಕೂಡ್ರುವದೂ ಮಂತ್ರಗುಪ್ತನು ತನ್ನ ಸಹಕಾರಿಗಳೊಂದಿಗೆ ಎಷ್ಟು ಗೌರವದಿಂದ ನಡೆದುಕೊಳ್ಳುತ್ತಿದ್ದನೆಂಬುದನ್ನೂ ಸಹಕಾರಿಗಳ ಶಿಸ್ತು ಮತ್ತು ವಿನಯಶೀಲತೆಯನ್ನೂ ತೋರಿಸುತ್ತವೆ. ಈ ಅಂಕದ ತುಂಬೆಲ್ಲ ಕಂಡುಬರುವ ರಾಜನೀತಿಯಲ್ಲಿಯ ಕೌಶಲ್ಯ ಮತ್ತು ರಾಜಕೀಯದಲ್ಲಿಯ ರೀತಿನೀತಿಗಳ ಸೂಕ್ಷ್ಮ ಪರಿಚಯವನ್ನು ಪರಿ ಶೀಲಿಸಿದರೆ ನಮ್ಮ ಕವಯಿತ್ರಿಗೆ ಈ ವಿಷಯಗಳ ಪ್ರತ್ಯಕ್ಷ ಸಂಬಂಧ ವಿರಬೇಕೆಂದು ಭಾಸವಾಗುತ್ತದೆ. ವೀರಸೇನನು ರಾಜಕುಮಾರನು ವಿಂಧ್ಯಾಟವಿಯಿಂದ ಪರಿಮಿತ ಸೈನ್ಯದೊಡನೆಯೂ ಸಮವಯಸ್ಕ ರಾದ ಕೆಲವರೊಡನೆಯೂ ಹೊರಟಿರುವನೆಂದೂ ಬೆಳಗಿನ ಹೊತ್ತಿಗೆ ರಾಜಧಾನಿಯನ್ನು ಮುಟ್ಟಬಹುದೆಂದೂ ತಿಳಿಸುವನು. ರಾಜಕೀಯ ಉದ್ದೇಶಕ್ಕಾಗಿ ಪ್ರೇಮದ ನಾಟಕವನ್ನು ಹೂಡಿದ ಮಂತ್ರಗುಪ್ತ ನಿಗೆ ರಾಜಕುಮಾರನ ಮನಸ್ಸು ಯಾವ ಕಡೆಗೆ ಹೆಚ್ಚು ಹರಿಯು ತ್ತಿದೆಯೋ ಎಂಬ ಚಿಂತೆಯಾಗಿದೆ. ಪ್ರೇಮದ ಗೊಂದಲದಲ್ಲಿಯೇ

ಸಿಲುಕಿ ರಾಜಕೀಯದ ಕಡೆಗೆ ಉದಾಸೀನನಾಗುವದೂ ಅವನಿಗೆ ಬೇಡ. ರಾಜಕೀಯದ ಒತ್ತಡದಿಂದ ಇತ್ತ ಬರಬೇಕಾದುದರಿಂದ ಮತ್ತು ಕೀರ್ತಿಮತಿಯೂ ಹೊರಟುಹೋದದ್ದರಿಂದ ರಾಜ ಕುಮಾರನ ಮನಸ್ಸು ಮುರಿಯುವದೂ ಬೇಡ. ರಾಜಕುಮಾರನು ರಾಜಧಾನಿಗೆ ತಿರುಗಿ ಬರುವದಕ್ಕೂ, ರಾಜ್ಯವನ್ನು ತಿರುಗಿ ದೊರ ಕಿಸುವದಕ್ಕೂ ತುಂಬ ಉತ್ಸಾಹದಿಂದ ಪ್ರವೃತ್ತನಾಗಿರುವನೆಂದು ವೀರಸೇನನಿಂದ ತಿಳಿದು ಮಂತ್ರಗುಪ್ತನು ಸಂತೋಷಗೊಳ್ಳು ವನು. ಶತ್ರುಗಳ ಮೇಲಿನ ಕೋಪದಿಂದ ಅವನ ಹೃದಯ ಕಾದದ್ದರಿಂದ ಮಧ್ಯಾಹ್ನದಲ್ಲಿ ರಾಜಹಂಸಿಯು ಸರೋವರದ ಕಾದ ನೀರನ್ನು ಬಿಡುವಂತೆ ಕೀರ್ತಿಮತಿಯೇ ಅದನ್ನು ಬಿಟ್ಟಿರಬೇಕೆಂದು ಉತ್ಪ್ರೇಕ್ಷಿಸುವನು. ಮಂತ್ರಗುಪ್ತನು ಮದುವೆಯ ಮಾತುಗಳ ನ್ನಾಡಲು ಪುರೋಹಿತನ ಮಗನನ್ನು ಈಗಾಗಲೇ ಕೀರ್ತಿಮತಿಯ ತಂದೆಯ ಕಡೆಗೆ ಕಳಿಸಿರುವನು. ಇವರ ಸಂಭಾಷಣೆಯು ಮುಂದು ವರೆದಿರುವಾಗಲೇ ರಾಜಕುಮಾರನು ನಗರಕ್ಕೆ ಬಂದುಮುಟ್ಟಿದ ಗದ್ದಲ ಕೇಳುವದು. ಸೂರ್ಯನು ಸಮುದ್ರದಿಂದ ಮೇಲೇಳುವನು.

ಐದನೆಯ ಅಂಕದಲ್ಲಿ ಮತ್ತೆ ನಾವು ಪ್ರೇಮದ ಕಥೆಗೆ ಹಿಂತಿರು ಗುವೆವು. ಕೀರ್ತಿಮತಿ ಯೋಗಸಿದ್ಧಿಯರು ತವರ್ಮರಿಗೆ ಮರ ಳಿದ ಮೇಲೆ ಯೋಗಸಿದ್ಧಿಯು ತನ್ನಲ್ಲಿದ್ದ ಚಿತ್ರಪಟವನ್ನು ಭವಾನಿಯು ಸ್ವಪ್ನದಲ್ಲಿ ತನಗೆ ಕೊಟ್ಟಳೆಂದೂ ಕಲ್ಯಾಣವರ್ಮ ನೊಡನೆ ಕೀರ್ತಿಮತಿಯ ವಿವಾಹವಾಗಬೇಕೆಂಬುದು ಅವಳ ಆಜ್ಞೆ ಎಂದೂ ಕೀರ್ತಿಮತಿಯ ತಂದೆ ತಾಯಿಗಳಿಗೆ ಹೇಳಿ ಅವರನ್ನು ಒಡಂಬಡಿಸುವಳು. ಅದೇ ಹೊತ್ತಿಗೆ ಮಂತ್ರಗುಪ್ತನು ಕಳಿಸಿದ ಪುರೋಹಿತನ ಮಗನೂ ಅಲ್ಲಿಗೆ ಬರುವನು. ಯೋಗಸಿದ್ಧಿ ಕೀರ್ತಿಮತಿ ಮತ್ತು ಪುರೋಹಿತರು ಪಾಟಲೀಪುತ್ರಕ್ಕೆ ಬರು

ವರು. ಉದ್ಯಾನದಲ್ಲಿ ಕಲ್ಯಾಣವರ್ಮನೂ ಕೀರ್ತಿಮತಿಯೂ ಮತ್ತೊಮ್ಮೆ ಸಂಧಿಸುವರು. ತಾವು ಈ ರೀತಿಯಾಗಿ ಕೂಡಿಕೊಳ್ಳುವದರಲ್ಲಿ ಮಂತ್ರಗುಪ್ತನ ಕೈವಾಡವಿದೆಯೆಂದು ತಿಳಿದು ರಾಜನು ಸಂತೋಷಪಡುವನು. ಅವನ ಸ್ವಾಮಿನಿಷ್ಠೆಯನ್ನು ಪ್ರಶಂಸಿಸುವನು. ಅಷ್ಟೊತ್ತಿಗೆ ಮುಗಿಲಲ್ಲಿ ಸಂಜೆಯ ಮೋಡಗಳು ಕಟ್ಟಿ ಅವುಗಳ ಗರ್ಜನೆಗೆ ನಾಯಿಕೆ ಗಾಬರಿಯಾಗಿ ನಾಯಕನನ್ನು ಅಪ್ಪಿಕೊಳ್ಳಲು ಮಳೆಗಾಲದ ಆರಂಭವನ್ನು ವರ್ಣಿಸುತ್ತ ನಾಯಕನು ಅಂತರ್ಗೃಹವನ್ನು ಸೇರುವನು. ಮಳೆಗಾಲದ ಆರಂಭದ ವರ್ಣನೆಯ ಕೊನೆಯ ಪದ್ಯವು ನೀಲಕಂಠನ ಸ್ತುತಿಯೂ ಆಗಿದ್ದು ನಾಟಕದ ಸಮಾಪ್ತಿಯನ್ನು ಸೂಚಿಸುವದು.

ಈ ರೀತಿಯಾಗಿ ಪ್ರೇಮ ಮತ್ತು ರಾಜಕೀಯದ ಘಟನೆಗಳನ್ನೊಳಗೊಂಡ ಈ ಚಿಕ್ಕ ನಾಟಕವು ಕಲ್ಯಾಣವರ್ಮನಿಗೆ ರಾಜ್ಯಪ್ರಾಪ್ತಿ ಮತ್ತು ಕೀರ್ತಿಮತಿಯ ಸಮಾಗಮಗಳಿಂದ ಮುಕ್ತಾಯವಾಗುತ್ತದೆ.

ಈ ನಾಟಕಕಾರಳ ಮೇಲೆ ಕಾಲಿದಾಸ, ಹರ್ಷ ಮತ್ತು ವಿಶಾಖದತ್ತರ ನಾಟಕಗಳ ಪ್ರಭಾವವು ವಿಶೇಷವಾಗಿ ಕಂಡುಬರುತ್ತದೆ. ಕಲ್ಯಾಣವರ್ಮನು ಗುರುಗಳ ಆಶ್ರಮದಿಂದ ಹೊರಡುವಾಗಿನ ವರ್ಣನೆಯು ಶಕುಂತಲೆಯು ಆಶ್ರಮ ಬಿಡುವಾಗಿನ ವರ್ಣನೆಯನ್ನು ಹೋಲುತ್ತದೆ. ನಾಯಕ ನಾಯಿಕೆಯರ ಪ್ರಥಮ ದರ್ಶನದ ದೃಶ್ಯವು ಸಾಮಾನ್ಯವಾಗಿ ಕಾಲಿದಾಸನ ಮಾದರಿಯನ್ನೇ ಅನುಸರಿಸಿದೆ. ಆದರೆ ಆ ಅಮರ ಕವಿಯ ಜಾಣ್ಮೆಯ ಅನುಕರಣೆಯು ಕೂಡ ದುಷ್ಕರವಾದ ಕೆಲಸ. ಕೇವಲ ನಾಯಕ ನಾಯಿಕೆ ಮತ್ತು ಗೆಳತಿಯರನ್ನು ಮಾತ್ರ ಪರಸ್ಪರ ಪರಿಚಯಕ್ಕೆ ಒದಗಿಸದೆ ವೃದ್ಧ ಕಂಚುಕಿಯನ್ನು ಕವಯಿತ್ರಿ ಅಲ್ಲಿರಿಸಿದ್ದಾಳೆ. ನಾಯಕನು ನೇರ

ವಾಗಿಯೇ ನಾಯಕಿಯ ಕುಲಗೋತ್ರಗಳನ್ನು ವಿಚಾರಿಸುತ್ತಾನೆ. ಬಲಭುಜ ಹಾರುವದು, ಸೀರೆಯ ಸೆರಗು ಬಳ್ಳಿಗೆ ಸಿಗುವದು ಇತ್ಯಾದಿಗಳು ನಮ್ಮ ಕವಯಿತ್ರಿಯ ಕಾಲದಷ್ಟೊತ್ತಿಗೆ ಪ್ರೇಮದ ಕಥಾವಸ್ತುವುಳ್ಳ ಸಂಸ್ಕೃತ ನಾಟಕಗಳಲ್ಲಿ ಅವಶ್ಯವಾಗಿ ಬರಬೇಕಾದ ಸಂಗತಿಗಳಾಗಿಬಿಟ್ಟಿರಬೇಕು. "ಉದ್ಯಾನಶರೀಷಪೇಶಲವಾದ ಶರೀರವು ಅಡವಿಯಲ್ಲಿರುವದು ಯೋಗ್ಯವಲ್ಲ." "ಕೀರ್ತಿಮತಿಯು ಬ್ರಹ್ಮನ ಸೃಷ್ಟಿಯಲ್ಲ" "ಇದು ಸ್ವಪ್ನವೋ ಮಾಯೆಯೋ" "ವಾಗರ್ಥಗಳಂತೆ ಇವರಿಬ್ಬರನ್ನು ಕೂಡಿಸುವೆನು;" "ಶೈಲೇಯಗಂಧಿನಿ ಶಿಲಾತಲೇ" ಇತ್ಯಾದಿಯಾಗಿ ಅನೇಕ ಕಡೆಗೆ ಕಲ್ಪನೆಯಲ್ಲಿಯೂ ಮಾತಿನಲ್ಲಿಯೂ ಕಾಳಿದಾಸನ ಅನುಕರಣೆಯೂ ಪ್ರಭಾವವೂ ಸ್ಪಷ್ಟವಾಗಿ ಕಂಡುಬರುತ್ತವೆ. ನಾಯಿಕೆ ಚಿತ್ರವನ್ನು ಬರೆಯುವದು, ಅದನ್ನು ಕಳೆದುಕೊಳ್ಳುವದು, ನಾಯಿಕೆ ದೇವತೆಯ ದರ್ಶನಕ್ಕೆ ಬಂದಾಗ ನಾಯಕ-ನಾಯಿಕೆಯರ ಪ್ರಥಮ ದರ್ಶನವಾಗುವದು ಇತ್ಯಾದಿ ಕೆಲವಂಶಗಳಲ್ಲಿ ಶ್ರೀಹರ್ಷನ ರತ್ನಾವಳಿ ಮತ್ತು ನಾಗಾನಂದ ನಾಟಕಗಳ ಆರಂಭ ಭಾಗಗಳ ಪ್ರಭಾವವು ಕಂಡುಬರುವದು. ರಾಜಕೀಯ ಘಟನೆಗಳ ಚಿತ್ರಣದಲ್ಲಿ ವಿಶಾಖದತ್ತನ ಮುದ್ರಾರಾಕ್ಷಸದ ಪ್ರಭಾವವೂ ಒಡೆದುಕಾಣುವದು. ವೇಷಧಾರಿಗಳೊಡನೆ ಸಂದೇಶಗಳನ್ನು ಕಳಿಸುವದು ಜನಾಭಿಪ್ರಾಯವನ್ನು ಅಳೆದುನೋಡುವದು ಹಾಗೂ ಜನರಲ್ಲಿ ಶತ್ರುಗಳ ವಿಷಯದಲ್ಲಿ ಅಪ್ರೀತಿಯನ್ನು ಹುಟ್ಟಿಸುವದು ಇವೇ ಮೊದಲಾದ ಕ್ರಮಗಳನ್ನು ಕೌಶಲ್ಯದಿಂದ ಅನುಸರಿಸಲಾಗಿದೆ. ಮಂತ್ರಗುಪ್ತನು ಅಮಾತ್ಯರಾಕ್ಷಸನಲ್ಲಿರುವ ಸ್ವಾಮಿಭಕ್ತಿ ಮತ್ತು ಉದಾರಹೃದಯವನ್ನು ಪಡೆದಿರುವನು. ಚಾಣಕ್ಯನ ನೀತಿಕುಶಲತೆಯೂ ಅವನಲ್ಲಿದೆ. ಅವನ ಸಮೀಪದ ಸೇವಕರಲ್ಲಿಯೇ ಒಬ್ಬನಿಗೆ ತಿಳಿದ ಗುಟ್ಟು

ಇನ್ನೊಬ್ಬನಿಗೆ ತಿಳಿದಿರುವದಿಲ್ಲ. ರಾಜಕೀಯ ರಹಸ್ಯಗಳನ್ನು ಕಾಪಾಡುವದರಲ್ಲಿ ಅವನು ಅಷ್ಟೊಂದು ದಕ್ಷತೆಯನ್ನು ತೋರಿಸುವನು. ಅವನ ನೀತಿ ಪ್ರಯೋಗಗಳು ಅಮಾತ್ಯರಾಕ್ಷಸನಂತೆ ಕಾಲತಪ್ಪಿ ಮಾಡಿದವುಗಳಲ್ಲ. ಕೌಮುದೀ ಮಹೋತ್ಸವದ ಕಲ್ಪನೆಯನ್ನು ಮುದ್ರಾರಾಕ್ಷಸದಿಂದಲೇ ತೆಗೆದುಕೊಂಡಂತಿದೆ. ಗೂಢಚಾರರು ಇಲ್ಲಿ ಪಾಶುಪತ ವೇಷದಲ್ಲಿರುವರು. ಮುದ್ರಾರಾಕ್ಷಸದಂತೆ ಅರ್ಹತರ ವೇಷದಲ್ಲಿರುವದಿಲ್ಲ. ಪರಿವ್ರಾಜಿಕೆ ಯೋಗಸಿದ್ಧಿಯು ಭವಭೂತಿಯ ಮಾಲತೀಮಾಧವದಲ್ಲಿಯ ಕಾಮಂದಕಿಯನ್ನು ನೆನಪಿಗೆ ತರುವಳು. ಭಾಸನ ಅವಿಮಾರಕ ನಾಟಕದ ಕಥೆಯು ಇಲ್ಲಿ ಉಲ್ಲೇಖಿಸಲ್ಪಟ್ಟಿದೆ. ಭಾಸನಾಟಕಗಳಂತೆ—"ಪ್ರಸ್ತಾವನಾ" ಎನ್ನುವದರ ಬದಲು "ಸ್ಥಾಪನಾ" ಎಂದಿದೆ. "ನಾದ್ಯಂತೇ ತತಃ ಪ್ರವಿಶತಿ ಸೂತ್ರಧಾರಃ" ಎಂಬುದು ಮಂಗಲಕ್ಕಿಂತ ಮೊದಲೇ ಬಂದಿದೆ. "ಟಂಕಚ್ಛೇದ್ಯೈರಂಧಕಾರಪಟಲೈಃ" ಎಂಬುದು ಮೃಚ್ಛಕಟಿಕದ "ಸೂಚೀಭೇದ್ಯಮ್ ತಮಃ" ಎಂಬುದನ್ನು ಹೋಲುತ್ತದೆ. ಹೀಗೆ ನಾಟಕಕಾರಳು ತನಗೆ ಉಪಲಬ್ಧವಿದ್ದ ಎಲ್ಲ ಉತ್ತಮ ಕೃತಿಗಳಲ್ಲಿಯ ಉತ್ತಮ ಅಂಶಗಳನ್ನು ತೆಗೆದುಕೊಂಡು ಕೇವಲ ಅನುಕರಣೆ ಎನಿಸದಂತೆ ಅವುಗಳನ್ನು ಪ್ರಕೃತ ಕಥಾವಸ್ತುವಿಗೆ ಹೊಂದಿಸಿಕೊಂಡು ಸೊಗಸಾದ ನಾಟಕವನ್ನು ಬರೆದಿದ್ದಾಳೆ.

ಪಾತ್ರಗಳ ರಚನೆಯೂ ತುಂಬ ಆಕರ್ಷಕವಾಗಿದೆ. ಸುಂದರವರ್ಮ ಹಾಗೂ ಕಲ್ಯಾಣವರ್ಮರು ಐತಿಹಾಸಿಕ ವ್ಯಕ್ತಿಗಳೇ ಎಂಬುದನ್ನು ಅರಿತುಕೊಳ್ಳಲು ನಮಗೆ ಯಾವ ಸಾಧನಗಳೂ ಇಲ್ಲ. ಚಂಡಸೇನನು ಯಾರು ಎಂಬುದೂ ತಿಳಿದುಬರುವದಿಲ್ಲ. ಈ ಬಗ್ಗೆ ವಿದ್ವಾಂಸರು ಮಾಡಿದ ಊಹೆಗಳು ಪ್ರಮಾಣಾಂತರಗಳಿಂದ

ಬಲಪಟ್ಟಿಲ್ಲ. ಇನ್ನುಳಿದ ಪಾತ್ರಗಳಂತೂ ಕಾಲ್ಪನಿಕವೆಂಬುದು ಸ್ಪಷ್ಟವೇ ಆಗಿದೆ. ಅವೆಲ್ಲ ಕಥೆಯ ಬೆಳವಣಿಗೆಗೆ ಮತ್ತು ರಂಗ ಪೋಷಣೆಗೆ ಅನುಕೂಲವಾಗಿವೆ. ಅವುಗಳಿಗೆ ಕೊಟ್ಟ ಹೆಸರುಗಳೂ ಸಮರ್ಪಕವಾಗಿವೆ. ಸಂತೋಷದ ಸುದ್ದಿಯನ್ನು ತಂದ ಸೇವಕ 'ನಂದಕ'. ಪರಸ್ಪರ ಭೆಟ್ಟಿಯಾಗುವ ಸಂದರ್ಭದಲ್ಲಿ ಬಂದವನು 'ಸಂಗತಕ'. ಸೇನಾಪತಿಗಳು 'ಕುಂಜರಕ' ಮತ್ತು 'ಸಿಂಹಲಕ'ರು. ಜನಾಭಿಪ್ರಾಯವನ್ನು ತಿಳಿದುಕೊಳ್ಳಲು ನಿಯಮಿಸಿದ ಗೂಢ ಚಾರನು ಲೋಕಾಕ್ಷಿ. ಅವನಿಗೆ ಅಕ್ಷದಾಸನೆಂಬ ಪದವಿಯಿದೆ. ಅವನ ಗೆಳೆಯ ವೇಶರಕ್ಷಿತ. ವಿದೂಷಕನು ಕ್ರಮದಂತೆ ಹಾಸ್ಯ ಪಾತ್ರನೂ, ನಮ್ರ ಸಚಿವನೂ ಆಗಿದ್ದರೂ ಅವನಾಡುವ ಹಾಸ್ಯದ ಮಾತುಗಳಲ್ಲಿ ಒಮ್ಮೊಮ್ಮೆ ದೊಡ್ಡ ಅನುಭವಗಳು ಅಡಗಿರುತ್ತವೆ. ರಾಜ್ಯವು ತಿರುಗಿ ದೊರೆತಮೇಲೆ ರಾಜಕುಮಾರನು ನಾಯಕಿಯ ಬಗ್ಗೆ ಚಿಂತಿಸುತ್ತಿದ್ದಾಗ ಅವನಿಗೆ ದೊಡ್ಡದೊಂದು ರಾಜಕೀಯ ರಹಸ್ಯವು ಹೊಳೆಯುವದು. "ವಯಸ್ಯ ಏಕಮ್ ರಾಜಕಾರ್ಯಮ್ ಮಂತ್ರಯಾಮಿ" ಗೆಳೆಯ ಒಂದು ರಾಜಕಾರ್ಯವನ್ನು ಹೇಳುವೆನು ಎಂದು ಗಂಭೀರವಾಗಿ ಆರಂಭಿಸುವನು. ಅವನು ಹೇಳುವ ರಾಜ ಕಾರ್ಯವಿಷ್ಟೇ "ಅಶಿತ್ವಾ ಪೀತ್ವಾ ತಿಷ್ಠತಾಮ್ ಕಿಮ್ ತೇನ ಅತಿಕ್ರಾಂತೇನ ಸ್ತ್ರೀವೃತ್ತಾಂತೇನ" ತಿಂದು ಕುಡಿದು ಸುಖ ವಾಗಿರು; ಆ ಹೆಣ್ಣಿನ ಸುದ್ದಿ ಹಾಳಾಗಲಿ—ಎನ್ನುವದೇ ಅವನು ಕಂಡ ರಹಸ್ಯ. ನೀನು ರಾಜನಾದಾಗ ಹಾಗೆ ಮಾಡು ಎಂದು ನಿಪುಣಿಕೆ ಹೇಳಿದಾಗ ಕೀರ್ತಿಮತಿಯೊಡನೆ ನಾವೂ ನಗುವೆವು. ನಾಟಕದಲ್ಲಿ ಶೃಂಗಾರವು ಮುಖ್ಯರಸವಾಗಿದೆ. ವೀರರಸವು ಅಂಗರಸವಾಗಿದೆ. ಪಂಚಸಂಧಿಗಳೂ, ಸಂಧ್ಯಂಗಗಳೂ ಯಥೋ ಚಿತವಾಗಿ ಬೆಳೆದು ಬಂದಿವೆ. ಪದ್ಯಗಳ ಸಂಖ್ಯೆ ಬೇಸರ

ಬರುವಷ್ಟು ಅಧಿಕವಾಗಿಲ್ಲ. ಸಂಭಾಷಣೆಗಳು ಚುರುಕಾಗಿವೆ. ಪ್ರಾಸಂಗಿಕವಾದ ಯಾವದೇ ದೃಶ್ಯವೂ ಬೇಸರ ತರುವಷ್ಟು ಬೆಳೆದಿಲ್ಲ. ಪಾತ್ರಗಳ ಪ್ರವೇಶವೂ, ನಿರ್ಗಮನವೂ ಆಕಸ್ಮಿಕವೆನಿಸುವದಿಲ್ಲ. ನಾಟಕದ ಕೊನೆಯು ಮಾತ್ರ ಸಾಂಪ್ರದಾಯಿಕವಾಗಿರುವದಿಲ್ಲ. ಕೊನೆಗೆ ಭರತವಾಕ್ಯವಿರುವದಿಲ್ಲ. ರಾಜ್ಯ ಪ್ರಾಪ್ತಿಗೂ, ಕೀರ್ತಿಮತಿಯ ಪ್ರಾಪ್ತಿಗೂ ಕಾರಣರಾದ ಮಂತ್ರಗುಪ್ತ, ಯೋಗಸಿದ್ಧಿಯರು ಅಲ್ಲಿರುವದಿಲ್ಲ. ಕೇವಲ ಪ್ರಮದವನದಲ್ಲಿ ನಾಯಕ ನಾಯಿಕೆಯರು ಭೆಟ್ಟಿಯಾಗುವರೇ ಹೊರತು ಪಟ್ಟಾಭಿಷೇಕ ಮತ್ತು ವಿವಾಹಗಳಲ್ಲಿ ಕಥೆ ಪರ್ಯವಸಾನವಾದ ಸೂಚನೆಯಿಲ್ಲ. ನಾಟಕಕ್ಕೆ ಕೌಮುದಿ ಮಹೋತ್ಸವವೆಂಬ ಹೆಸರು ಸಂಪಾದಕರು ಕೊಟ್ಟ ಹೆಸರಾಗಿದೆ. ಅಂಕಗಳ ಕೊನೆಗಾಗಲೀ ಗ್ರಂಥದ ಕೊನೆಗಾಗಲೀ ಹಸ್ತಪ್ರತಿಯಲ್ಲಿ ಈ ಹೆಸರು ನಿರ್ದಿಷ್ಟವಾಗಿಲ್ಲ. ಪ್ರಸ್ತಾವನೆಯಲ್ಲಿ ನಾಟಕದ ಹೆಸರು ಬರಬೇಕಾದ ಸ್ಥಳದಲ್ಲಿ "ಅಸ್ಯೈವ ರಾಜ್ಞಃ ಸಮತೀತಮ್ ಚರಿತಮ್ ಅಧಿಕೃತ್ಯ" ಎಂದಿದೆ. ನಾಟಕವನ್ನು ಆಡುವ ಸಂದರ್ಭವು ಮಾತ್ರ ಕೌಮುದಿ ಮಹೋತ್ಸವದ ಸಂದರ್ಭ ಎಂದಿದೆ. ಇದರಿಂದ ನಾಟಕದ ಹೆಸರೇ ಅನಿರ್ದಿಷ್ಟವಾಗಿ ಉಳಿದಿದೆ. ಅದು ಏನೇ ಇದ್ದರೂ ಸಂಪಾದಕರು ಕೊಟ್ಟ ಹೆಸರು ಆಕರ್ಷಕವಾಗಿದೆ.

ಅಲ್ಲಲ್ಲಿ ಬರುವ ಅನೇಕ ಮಾತುಗಳಿಂದ ಕವಯಿತ್ರಿಯ ಲೋಕಾನುಭವವೂ ಮಾತಿನ ಜಾಣ್ಮೆಯೂ ತಿಳಿದುಬರುತ್ತವೆ. " ರಂಗಭೂಮಿಗೆ ಬಂದಾಗ ಪಾತ್ರದ ಮಾತುಗಳಂತೆ ರಾಜನೀತಿಯು ಪ್ರಸಂಗ ಬಂದಾಗ ತಡವರಿಸುತ್ತದೆ." " ಶಿಕ್ಷಣದಿಂದ ಬುದ್ಧಿವಂತನ ಮಾತು ಹೇಗೋ ಹಾಗೆ ತಾರುಣ್ಯದಿಂದ ಯುವತಿಯರು ಶೋಭಿಸುತ್ತಾರೆ. " " ನೆರಳು ಬಿಸಿಲನ್ನು ಬೆನ್ನುಹತ್ತುವಂತೆ ವಿಪತ್ತುಗಳು

ತೇಜಸ್ವಿಯ ಬೆನ್ನುಹತ್ತುತ್ತವೆ. ” “ ಪ್ರಮಾದದ ಅಂಜಿಕೆಯಿಂದ ವಿವೇಕಿಗಳ ಕಾರ್ಯಸಿದ್ಧಿಯು ತಡವಾಗಿ ಫಲಿಸುತ್ತದೆ. ” ಇತ್ಯಾದಿ ಯಾಗಿ ಅನುಭವದ ಮಾತುಗಳು ನಾಟಕದ ತುಂಬೆಲ್ಲ ಕಂಡು ಬರುತ್ತವೆ.

ನಾಟಕದಂತೆಯೇ ವಿಜ್ಜಿಕೆಯುವೆಂದು ಪ್ರಸಿದ್ಧವಾದ ೩೦ ಬಿಡಿ ಪದ್ಯಗಳೂ ತುಂಬ ಆಕರ್ಷಕವಾಗಿವೆ. ಅವು ಋತು, ಸೂರ್ಯೋ ದಯ, ಗಿಡ, ಹೂವು, ಬೀಸುಕುಟ್ಟುವ ಹಾಡು, ಸ್ತ್ರೀಸ್ವಭಾವ, ಕವಿಪ್ರಶಂಸೆ ಇತ್ಯಾದಿ ವಿಷಯುಗಳನ್ನೊಳಗೊಂಡಿವೆ.

ಕವೇರಭಿಪ್ರಾಯಮಶಬ್ದಗೋಚರಮ್ ।
ಸ್ಫುರಂತಮಾರ್ದ್ರೇಷು ಪದೇಷು ಕೇವಲಮ್ ॥
ಸ್ಫುರದ್ಭಿರಂಗೈಃ ಕೃತರೋಮವಿಕ್ರಿಯೈಃ ।
ಜನಸ್ಯ ತೂಷ್ಣೀಮ್ ಭವತೋಽಯಮಂಜಲಿಃ ॥

ಎಂಬ ಪದ್ಯದಲ್ಲಿ ವಿಜ್ಜಿಕೆಯು ಸುಕವಿಗಳ ಕಾವ್ಯಗಳಲ್ಲಿಯ ಧ್ವನಿಯನ್ನು ಏಕಾಗ್ರಚಿತ್ತದಿಂದ ಆಸ್ವಾದಿಸುವ ಸಹೃದಯ ರಿಗೆ ತನ್ನ ಗೌರವವನ್ನು ವ್ಯಕ್ತಪಡಿಸಿದ್ದಾಳೆ. ಓದುಗರ ಸಹೃದಯ ತೆಯ ಬೆಲೆ ಅವಳಿಗೆ ಚೆನ್ನಾಗಿ ಗೊತ್ತು. ಇನ್ನೊಂದು ಪದ್ಯ ದಲ್ಲಿ “ ಒಂದು ಕಾಲದಲ್ಲಿ ಮದ್ದಾನೆ ತಿರುಗಾಡಿದರೂ ಕಲಕದ ಈ ಕೆರೆಯ ನೀರಲ್ಲಿ ಇಂದು ಒಂದು ನೀರುಗೋಳಿ ಹೆಜ್ಜೆ ಇಟ್ಟರೂ ಕೆಸರಾಗುತ್ತದೆ, ” ಎಂದು, ಒಂದು ಕಾಲದಲ್ಲಿ ಐಶ್ವರ್ಯವಂತ ನಾಗಿದ್ದು ಮದ್ದಾನೆಯಂಥ ಅತಿಥಿಗಳ ಭಾರವನ್ನು ತಡೆದವನು ಇಂದು ಅಲ್ಪದಾನವನ್ನು ಕೊಡಲು ಅಸಮರ್ಥನೆಂಬುವದನ್ನು ಅನ್ಯೋಕ್ತಿಯಿಂದ ಸುಂದರವಾಗಿ ಸೂಚಿಸಿದ್ದಾಳೆ.

ದೃಷ್ಟಿಮ್ ಹೇ ಪ್ರತಿವೇಶಿನಿ ಕ್ಷಣಮಿಹಾಪ್ಯಸ್ಮದ್ಗೃಹೇ ದಾಸ್ಯಸಿ ।
ಪ್ರಾಯೇಣಾಸ್ಯ ಶಿಶೋಃ ಪಿತಾ ನ ವಿರಸಾಃ ಕೌಪೀರಪಃ ಪಾಸ್ಯತಿ ॥

ಏಕಾಕಿನ್ಯಪಿ ಯಾಮಿ ಸತ್ವರಮಿತಃ ಸ್ರೋತಃ ತಮಾಲಾಕುಲಮ್ ।
ನೀರಂಧ್ರಾಸ್ತನುಮಾಲಿಖಂತು ಜರಠಚ್ಛೇದಾನಲಗ್ರಂಥಯಃ ॥

"ನೆರೆಮನೆಯುವಳೇ ನಮ್ಮ ಮನೆಯ ಕಡೆಗೆ ತುಸು ನೋಡಿ ಕೊಂಡಿರು. ಈ ನನ್ನ ಮಗುವಿನ ತಂದೆ ಬಾವಿಯ ಸವಳು ನೀರು ಕುಡಿಯುವದಿಲ್ಲ. ಆದುದರಿಂದ ಒಬ್ಬಂಟಿಗಳಾದರೂ ಚಿಂತೆಯಿಲ್ಲ. ಹಳ್ಳಕ್ಕೆ ಹೋಗುವೆನು. ಅಲ್ಲಿ ತಮಾಲಗಿಡಗಳ ಕತ್ತಲಿದೆ. ಮುಳ್ಳು ಮೈಗೆ ಚುಚ್ಚಲಿ. ಬೇಗನೇ ಹೋಗಿಬರುವೆನು." ಎಂಬ ಪದ್ಯದಲ್ಲಿ ಅಸತಿಯು ಸಂಕೇತಸ್ಥಾನಕ್ಕೆ ಹೋಗುವದೂ ನಖಕ್ಷತಾದಿಗಳೂ ಸೂಚಿತವಾಗಿವೆ. ಭತ್ತ ಕುಟ್ಟುವ ವರ್ಣನೆ ಇನ್ನೊಂದು ಪದ್ಯ ದಲ್ಲಿ ಸೊಗಸಾಗಿದೆ—"ವಿಲಾಸದಿಂದ ಒನಕೆಯನ್ನು ಮೇಲಕ್ಕೆ ತ್ತುವ ಪುಷ್ಟವಾದ ತೋಳುಗಳ ಚಲನೆಗನುಸರಿಸಿ ಮೇಲೆ ಕೆಳಗೆ ಸರಿಯುವ ಬಳೆಗಳ ನಿನಾದ ಮತ್ತು ವಿಶಾಲವಾದ ಉರಃಸ್ಥಲಗಳ ಏರಿಳಿತಗಳಿಗನುಸರಿಸಿ ಬರುವ ಹುಂಕಾರಗಳೆಂಬ ಪಕ್ಕವಾದ್ಯ ಗಳಿಂದ ಕೂಡಿದ ಭತ್ತ ಕುಟ್ಟುವ ಹಾಡುಗಳು ಮನಸ್ಸನ್ನು ಸೆಳೆ ಯುತ್ತವೆ.

ಅಸ್ಥಿರ ಮನೇಕರಾಗಮ್ ಗುಣರಹಿತಮ್ ನಿತ್ಯವಕ್ರ ದುಷ್ಪ್ರಾಪಮ್ ।
ಪ್ರಾವೃಷಿ ಸುರೇಂದ್ರಚಾಪಮ್ ವಿಭಾವ್ಯತೇ ಯುವತಿ ಚಿತ್ತಮಿವ ॥

ಎಂಬ ಪದ್ಯದಲ್ಲಿ ಯುವತಿಯರ ಮನಸ್ಸನ್ನು ಕಾಮನ ಬಿಲ್ಲಿಗೆ ಹೋಲಿಸಿದ್ದು ತುಂಬ ಮಾರ್ಮಿಕವಾಗಿದೆ. ಯೋಗ್ಯತಾವಂತನಾದ ಕವಿ ಅಥವಾ ವಿದ್ವಾಂಸನು ಯೋಗ್ಯತೆಯನ್ನರಿಯದವನ ಆಶ್ರಯ ದಲ್ಲಿದ್ದು ದುರ್ಲಕ್ಷಿಸಲ್ಪಟ್ಟಿರುವನು ಎಂಬಂಶವನ್ನು "ಸಂಪಿಗೆ ಮರವೆ ಈ ಹಾಳು ಹಳ್ಳಿಯ ಮೂರ್ಖನ ಮನೆಯಂಗಳದಲ್ಲಿ ನಿನ್ನನ್ನು ಯಾರೋ ಹಚ್ಚಿರುವರಲ್ಲ. ಇಲ್ಲಿ ಹುಟ್ಟಿಕೊಳ್ಳುತ್ತಿರುವ ಗಿಡಗಂಟಿಗಳ ಮೇಲೆಯೇ ಲೋಭವು ಹೆಚ್ಚಾಗಿ ಅಲಕ್ಷಿಸಲ್ಪಟ್ಟ

ನಿನ್ನ ಎಲೆಗಳೆಲ್ಲ ಹಾಳು ತೋಟಗಳಲ್ಲಿದ್ದಂತಾಗಿವೆ” ಎಂಬ ಚಂಪಕಾನ್ಯೋಕ್ತಿಯಲ್ಲಿ ಅರ್ಥವತ್ತಾಗಿ ಚಿತ್ರಿಸಿರುವಳು. “ಕಾಮನೇ ನಿನ್ನನ್ನು ಶಿವನು ಮೊದಲು ಜಯಿಸಿದನು. ಬಳಿಕ ಬುದ್ಧನು ಸೋಲಿಸಿದನು. ನನ್ನನ್ನು ಬಿಟ್ಟು ಪ್ರವಾಸದಲ್ಲಿರುವ ನನ್ನ ಕಾಂತನೂ ನಿನ್ನನ್ನು ಜಯಿಸಿರುವನು. ಅವರೆಲ್ಲರನ್ನು ಬಿಟ್ಟು ಅಬಲೆಯಾದ ನನ್ನನ್ನು ಹಿಂಸಿಸುವಿಯಲ್ಲ! ಅದುದರಿಂದ “ಧಿಕ್ ತ್ವಾಮ್ ಧಿಕ್ ತವ ಪೌರುಷಮ್ ಧಿಗುದಯಮ್ ಧಿಕ್ ಕಾರ್ಮುಕಮ್ ಧಿಕ್ ಶರಾನ್” ಎಂದು ವಿರಹಿಣಿಯು ವ್ಯಥೆಯನ್ನು ಮನಸ್ಸು ಕರಗುವಂತೆ ಚಿತ್ರಿಸಿರುವಳು. ಕವಯಿತ್ರಿ ವಿಜ್ಜಿಕೆಯು ಜೀವನದಲ್ಲಿಯ ಸೊಗಸನ್ನು ಅರಿತಂತೆ ಕಹಿಯನ್ನೂ ತಿಳಿದವಳಾಗಿದ್ದಳು. ‘ವಿಧಿಯು ಚಿಂತೆ ಎಂಬ ಚಕ್ರದಮೇಲೆ ನಮ್ಮ ಮನಸ್ಸನ್ನು ಮಣ್ಣು ಮುದ್ದೆಯಂತಿಟ್ಟು ತಿರುಗಿಸುವನು. ಅವನು ಏನು ಮಾಡಬೇಕೆಂದಿರುವನೋ ಯಾರಿಗೆ ಗೊತ್ತು?’ ಎಂದು ದೈವದ ಅಗಾಧತೆಯನ್ನು ವಿವರಿಸುವಳು. ಹೀಗೆ ಭಾವ ನಿರೂಪಣೆ ಮತ್ತು ಚಿತ್ತಾಕರ್ಷಣೆಯಲ್ಲಿ ಉನ್ನತ ಮಟ್ಟದ ಸುಮಾರು ಮೂವತ್ತೆರಡು ಬಿಡಿಪದ್ಯಗಳು ವಿಜ್ಜಿಕೆಯ ಪದ್ಯಗಳೆಂದು ಸುಭಾಷಿತ ಗ್ರಂಥಗಳಲ್ಲಿಯೂ ಅಲಂಕಾರ ಗ್ರಂಥಗಳಲ್ಲಿಯೂ ಉಲ್ಲೇಖಿಸಲ್ಪಟ್ಟಿರುವವು. ಇವಳ ಪದ್ಯಗಳನ್ನು ಓದಿದ ಮೇಲೆ “ಯಾ ವೈದರ್ಭಗಿರಾಮ್ ವಾಸಃ ಕಾಲಿದಾಸಾದನಂತರಮ್” ಎಂದು ರಾಜಶೇಖರನು ಇವಳನ್ನು ಹೊಗಳಿದ್ದು ಸಾರ್ಥಕವೆಂದು ಮನದಟ್ಟಾಗುವದು. ಇವಳು ಯಾರು ಎಂಬ ಬಗ್ಗೆ ಕೊನೆಯ ನಿರ್ಣಯವನ್ನು ಹೇಳುವದು ದುಷ್ಕರವಾಗಿದ್ದರೂ ಕರ್ನಾಟಕ ದೇಶದವಳು ಎಂದು ಮಾತ್ರ ಖಂಡಿತವಾಗಿ ಹೇಳಬಹುದಾದ್ದರಿಂದ ನಮ್ಮ ಆದರಾಭಿಮಾನಗಳು ಉಕ್ಕಿಬರುವವು.

# ಗಂಗಾದೇವಿ

ಸಂಸ್ಕೃತ ಕವಯಿತ್ರಿಯರಲ್ಲಿ ಇನ್ನೊರ್ವ ರಸಿಕಳಾದ ಕವಯಿತ್ರಿಯು ವಿಜಯನಗರದ ಗಂಗಾದೇವಿಯು. ಗಂಗಾದೇವಿಯು ಬುಕ್ಕರಾಯನ ಸೊಸೆ. ಹಿರಿಯ ಕಂಪಣನ ಹೆಂಡತಿ. ಇವಳು ತನ್ನ ಪತಿ ಕಂಪಣರಾಯನು ತಂದೆಯ ಆಜ್ಞೆಯಂತೆ ದಕ್ಷಿಣ ದೇಶಕ್ಕೆ ದಂಡೆತ್ತಿ ಹೋಗಿ ವನ್ಯರಾಜರನ್ನೂ, ರಾಜಗಂಭೀರ ( ಪಡವೀಡು ) ದುರ್ಗದಲ್ಲಿದ್ದ ಚಂಪರಾಯ ( ಸಂಭವರಾಯ ) ನನ್ನೂ, ಮಧುರೆಯ ಮುಸಲ್ಮಾನರನ್ನೂ ಸೋಲಿಸಿದ ಘಟನೆಗಳನ್ನು ವರ್ಣಿಸಿ "ಮಧುರಾವಿಜಯಮ್" ಅಥವಾ "ವೀರಕಂಪಣರಾಯಚರಿತಮ್" ಎಂಬ ಕಾವ್ಯವನ್ನು ಬರೆದಿದ್ದಾಳೆ. ಈ ಕಾವ್ಯದಲ್ಲಿ ಉಲ್ಲೇಖಿಸಿದ ಘಟನೆಗಳು ಕ್ರಿ. ಶ. ೧೩೬೦ರಿಂದ ೧೩೭೧ ಈ ಕಾಲಾವಧಿಯಲ್ಲಿ ನಡೆದ ಘಟನೆಗಳಾಗಿವೆ. ಈ ಗ್ರಂಥದ ಸಮಗ್ರ ಪ್ರತಿಯು ದೊರೆಯುವದಿಲ್ಲ. ಮೊದಲಿನ ಐದು ಮತ್ತು ಏಳನೆಯ ಸರ್ಗಗಳು ಪೂರ್ಣವಾಗಿದ್ದು ಆರು, ಎಂಟು ಮತ್ತು ಎಂಟರ ಮುಂದಿನ ಸರ್ಗಗಳ ಕೆಲಭಾಗಗಳು ಮಾತ್ರ ದೊರೆತಿರುತ್ತವೆ. ಗಂಗಾದೇವಿಯು ದಂಡಯಾತ್ರೆಯ ಕಾಲದಲ್ಲಿ ಕಂಪಣನ ಜೊತೆಗಿದ್ದು ದಿಗ್ವಿಜಯವನ್ನು ಪ್ರತ್ಯಕ್ಷವಾಗಿ ನೋಡಿ ದಂಡಯಾತ್ರೆಯು ನಡೆಯುತ್ತಿದ್ದಂತೆಯೇ ಅಥವಾ ಮುಗಿದ ಕೆಲ ದಿನಗಳಲ್ಲಿಯೇ ಕಾವ್ಯವನ್ನು ಬರೆದಂತಿದೆ.

ಕಾವ್ಯದ ಆರಂಭದಲ್ಲಿ ಕವಯಿತ್ರಿಯು ದೇವತಾವಂದನೆಯ ನಂತರ ಕಾಳಾಮುಖ ಸಂಪ್ರದಾಯದ ಕ್ರಿಯಾಶಕ್ತಿ ಆಚಾರ್ಯರಿಗೆ ನಮಸ್ಕರಿಸುವಳು. ವಾಲ್ಮೀಕಿ, ವ್ಯಾಸ, ಕಾಲಿದಾಸ,

ಬಾಣಭಟ್ಟ, ಭಾರವಿ, ದಂಡಿ ಮತ್ತು ಭವಭೂತಿ ಇವರ ಕೃತಿಗಳ ಮಹಿಮೆಯನ್ನು ಹೊಗಳುವಳು.

ದಾಸತಾಮ್ ಕಾಲಿದಾಸಸ್ಯ ಕವಯಃ ಕೇ ನ ಬಿಭ್ರತೇ ।
ಇದಾನೀಮಪಿ ತಸ್ಯಾರ್ಥಾನುಪಜೀವಂತ್ಯಮೀ ಯತಃ ॥

ಎಂಬ ಅವಳ ಮಾತು ಅವಳಿಗೇ ಅನ್ವಯಿಸುವದು. ಕಾಲಿದಾಸನ ಪ್ರಭಾವ ಇವಳ ಕಾವ್ಯದ ಮೇಲೆ ವಿಪುಲವಾಗಿದೆ. ಮೇಲೆ ಹೇಳಿದ ಅತಿ ಪ್ರಸಿದ್ಧ ಕವಿಗಳನ್ನಲ್ಲದೆ ಕರ್ಣಾಮೃತ ಕವಿ, ತಿಕ್ಕಯ, ಅಗಸ್ತ್ಯ, ಗಂಗಾಧರಕವಿಗಳನ್ನೂ ಸ್ಮರಿಸುವಳು. ಅಗಸ್ತ್ಯನು ಎಪ್ಪತ್ತುನಾಲ್ಕು ಕಾವ್ಯಗಳನ್ನು ಬರೆದವನು ಎಂದು ಹೇಳುವಳು. ಗಂಗಾಧರನು ಭಾರತದ ಕಥೆಯನ್ನು ನಾಟಕ ರೂಪದಲ್ಲಿ ಬರೆದಿರುವದನ್ನು ತಿಳಿಸುವಳು. ಕೊನೆಯದಾಗಿ ವಿಶ್ವನಾಥ ಕವಿಯನ್ನು ಹೊಗಳುತ್ತ ಅವನ ಕೃಪೆಯಿಂದ ತನಗೆ ಸಾರ್ವಜ್ಞ್ಯವು ದೊರೆಯಿತೆಂದು ಹೇಳುವಳು. ಇದರಿಂದ ವಿಶ್ವನಾಥ ಕವಿಯು ಇವಳ ವಿದ್ಯಾಗುರುವಾಗಿರಬಹುದೆಂದು ಊಹಿಸಬಹುದಾಗಿದೆ. ಅಗಸ್ತ್ಯನು ವಿದ್ಯಾನಾಥನೆಂದು ಪ್ರಸಿದ್ಧನಾದ, ಬಾಲಭಾರತ, ಪ್ರತಾಪರುದ್ರಯಶೋಭೂಷಣ ಮತ್ತು ಕೃಷ್ಣಚರಿತ ಮೊದಲಾದವುಗಳನ್ನು ಬರೆದ ಕವಿ. ಇವನು ವರಂಗಲ್ಲಿನ ಕಾಕತೀಯ ಅರಸು ಪ್ರತಾಪರುದ್ರನ (ಕ್ರಿ.ಶ. ೧೨೯೪-೧೩೨೫) ಆಸ್ಥಾನ ಕವಿಯಾಗಿದ್ದನು. ವಿಜಯನಗರದ ಸಂಗಮ, ಬುಕ್ಕರೂ ಇವನಿಗೆ ಪೋಷಕರಾಗಿದ್ದರು. ಗಂಗಾಧರನು ಅಗಸ್ತ್ಯನ ತಂಗಿಯ ಮಗನು. ಗಂಗಾದೇವಿಯ ಗುರುವಾದ ವಿಶ್ವನಾಥನು ಈ ಗಂಗಾಧರನ ಮಗನು ಮತ್ತು ಅಗಸ್ತ್ಯನ ಶಿಷ್ಯನು. ತಿಕ್ಕಯನು ಬಹುಶಃ ಪ್ರಸಿದ್ಧ ತೆಲಗು ಕವಿ ತಿಕ್ಕಣ್ಣನಾಗಿರಬಹುದು. ಹೀಗೆ ಪ್ರಾಚೀನ ಕವಿಗಳನ್ನೂ ಮತ್ತು ತನಗೆ ಸಮಕಾಲೀನರೂ ತನ್ನ ಗುರುಪರಂಪರೆಗೆ ಸೇರಿದವರೂ

ಆದ ಕವಿಗಳನ್ನೂ ಹೊಗಳಿ ಕವಯಿತ್ರಿ ಗಂಗಾದೇವಿಯು ಕವಿ ಸಹೃದಯ ಮತ್ತು ಕಾವ್ಯಗಳ ಬಗ್ಗೆ ಕೆಲವು ವಿಚಾರಪೂರ್ಣವಾದ ಮಾತುಗಳನ್ನು ಹೇಳುವಳು.

ಕ್ವಚಿದರ್ಥಃ ಕ್ವಚಿಚ್ಛಬ್ದಃ ಕ್ವಚಿದ್ಭಾವಃ ಕ್ವಚಿದ್ರಸಃ ।
ಯತ್ರ ಕೃತೇ ಸಂತಿ ಸರ್ವೇಽಪಿ ಸ ನಿಬಂಧೋ ನ ವಿದ್ಯತೇ ॥

ಕೆಲವು ಕೃತಿಗಳಲ್ಲಿ ಅರ್ಥನಿರೂಪಣೆ ಚನ್ನಾಗಿರುವದು. ಕೆಲವೆಡೆ ಶಬ್ದಯೋಜನೆ ಚನ್ನಾಗಿರುವದು. ಕೆಲವು ರಚನೆಗಳಲ್ಲಿ ಭಾವವೂ ರಸವೂ ಸೊಗಸಾಗಿರುವವು. ಆದರೆ ಇವೆಲ್ಲವೂ ಒಂದೆಡೆಗೆ ದೊರೆಯುವ ಕೃತಿಗಳು ದುರ್ಲಭ ಎಂಬ ಅವಳ ಮಾತು ಕಾವ್ಯರಚನೆಯಲ್ಲಿ ಅವಳಿಗಿರುವ ಹೊಣೆಗಾರಿಕೆಯ ಅರಿವನ್ನು ತೋರಿಸುತ್ತದೆ.

ನಿರ್ದೋಷಾಪ್ಯಗುಣಾ ವಾಣೀ ನ ವಿದ್ವಜ್ಜನರಂಜಿನೀ ।
ಪತಿವ್ರತಾಪ್ಯರೂಪಾ ಸ್ತ್ರೀ ಪರಿಣೇತ್ರೇ ನ ರೋಚತೇ ॥

"ಕಾವ್ಯದಲ್ಲಿ ಕೇವಲ ದೋಷಗಳಿಲ್ಲದಿದ್ದರೆ ಸಾಲದು. ಗುಣಗಳಿಲ್ಲದೆ ಅದು ವಿದ್ವಜ್ಜನರ ಮನಸ್ಸನ್ನು ಸೆಳೆಯಲಾರದು. ಪತಿನಿಷ್ಠೆಯಾದರೂ ರೂಪವತಿಯಲ್ಲದವಳು ಗಂಡನ ಮನಸ್ಸನ್ನು ಆಕರ್ಷಿಸಲಾರಳು" ಎಂಬ ಅವಳ ಮಾತಿನಲ್ಲಿ ಕಾವ್ಯದ ಸತ್ಯಕ್ಕಿಂತ ಜೀವನದ ಸತ್ಯ ತುಂಬಿದೆ.

ನ ಪ್ರಾರ್ಥನೀಯಃ ಸತ್ ಕಾವ್ಯಶ್ರುತ್ಯೈ ಸಹೃದಯೋ ಜನಃ ।
ಸ್ವಾದು ಪುಷ್ಪರಸಾಸ್ವಾದೇ ಕಃ ಪ್ರೇರಯತಿ ಷಟ್ಪದಮ್ ॥

"ಒಳ್ಳೆಯ ಕಾವ್ಯವನ್ನು ಕೇಳಲು ಸಹೃದಯರನ್ನು ಕರೆದು ತರುವ ಆವಶ್ಯಕತೆಯಿಲ್ಲ. ಮಧುರವಾದ ಪುಷ್ಪರಸವನ್ನು ಸೇವಿಸಲು ಭ್ರಮರಗಳನ್ನು ಯಾರು ಪ್ರಚೋದಿಸುವರು" ಎಂಬ ಮಾತಿನಲ್ಲಿ ಕವಯಿತ್ರಿಗೆ ತನ್ನ ಕಾವ್ಯದ ಯೋಗ್ಯತೆಯ ಬಗೆಗಿರುವ ಆತ್ಮವಿಶ್ವಾಸ

ಮತ್ತು ಸಹೃದಯ ವಾಚಕರಲ್ಲಿರುವ ಆದರಗಳು ವ್ಯಕ್ತವಾಗುತ್ತವೆ.

ಆರಂಭದಲ್ಲಿ ಹೀಗೆ ಅನುಭವದ ಮತ್ತು ವಿವೇಕದ ಮಾತುಗಳನ್ನು ಹೇಳಿ — "ಸಮಸ್ತಸಾಮಂತಮಸ್ತಕನ್ಯಸ್ತಶಾಸನ" ನಾದ ಹರಿಹರನ ತಮ್ಮ ಬುಕ್ಕರಾಜನೆಂಬ ಅರಸನಿದ್ದನು ಎಂದು ಪ್ರೌಢವಾದ ರೀತಿಯಲ್ಲಿ ಕಾವ್ಯನಿರೂಪಣೆಗೆ ತೊಡಗುವಳು.

ಬುಕ್ಕರಾಜನ ವರ್ಣನೆಯು ಸಾಮಾನ್ಯವಾಗಿ ಸಂಸ್ಕೃತ ಕಾವ್ಯಗಳಲ್ಲಿ ಬರುವ ಸಮ್ರಾಟರ ವರ್ಣನೆಯ ಧಾಟಿಯಲ್ಲಿಯೇ ಇದ್ದರೂ ಕವಯಿತ್ರಿಯ ಕಲ್ಪನಾಚಾತುರ್ಯ ಮತ್ತು ಅನುಭವಗಳೂ ಮೂಡಿಬಂದಿರುವವು.

**ವಿವೇಕಮೇವ ಸಚಿವಮ್ ಧನುರೇವ ವರೂಥಿನೀಮ್ ।**
**ಬಾಹುಮೇವ ರಣೋತ್ಸಾಹೇ ಯಃ ಸಹಾಯಮಮನ್ಯತ ॥**

ಬುಕ್ಕರಾಜನು ವಿವೇಕವೇ ಮಂತ್ರಿ, ಧನುಸ್ಸೇ ಸೈನ್ಯ, ಬಾಹುವೇ ಯುದ್ಧದಲ್ಲಿ ಸಹಾಯಕ ಎಂದು ಭಾವಿಸಿದ್ದನು ಎಂಬ ವರ್ಣನೆ ಬುಕ್ಕನ ವ್ಯಕ್ತಿತ್ವದ ಘನತೆಯನ್ನು ತೋರಿಸುತ್ತದೆ.

**ಯಸ್ಯ ಕೀರ್ತ್ಯಾ ಪ್ರಸರ್ಪಂತ್ಯಾ ಗುಣಕರ್ಪೂರಶಾಲಿನಃ ।**
**ಜಗದಂಡಕರಂಡಸ್ಯ ಕ್ಷೌಮಕಂಚುಲಿಕಾಯಿತಮ್ ॥**

ಸುತ್ತಲೂ ಹಬ್ಬುತ್ತಿರುವ ಬುಕ್ಕರಾಜನ ಕೀರ್ತಿಯು ಅವನ ಗುಣಕರ್ಪೂರವನ್ನಿಟ್ಟಿರುವ ಜಗತ್ತೆಂಬ ಕರಂಡಕಕ್ಕೆ ಹೊದಿಸುವ ರೇಶಿಮೆಯ ಬಟ್ಟೆಯಾಯಿತು ಎಂಬಲ್ಲಿ ಕಲ್ಪನೆಯ ಚಾತುರ್ಯವಿದೆ.

ಬುಕ್ಕರಾಜನನ್ನು ವರ್ಣಿಸಿ ಅವನ ರಾಜಧಾನಿಯಾದ ವಿಜಯನಗರದ ಸುಂದರವಾದ ಶಬ್ದಚಿತ್ರವನ್ನು ಗಂಗಾದೇವಿಯು ಕೊಡುವಳು.

ತುಂಗಭದ್ರೆಯಿಂದ ಸುತ್ತುವರಿದ ವಿಜಯನಗರವು ಅಮರಾವತಿಯನ್ನೇ ಹೋಲುತ್ತಿತ್ತು. ಮೇರುಪರ್ವತದಂಥ ಗೋಪುರಗಳು,

ವಸಂತಋತುವಿನ ಆವಾಸಗಳಂತಿದ್ದ ತೋಟಗಳು, ಕ್ರೀಡಾಪರ್ವತ ಗಳು, ಸರೋವರಗಳು, ಶುಭ್ರವಾದ ಸೌಧಗಳು ಇರುವ ಈ ನಗರವು.

**ಲೀಲೇವ ದೃಷ್ಟಿವೃದ್ಧೀನಾಮ್ ಶಾಲೇವ ಸಕಲ ಶ್ರಿಯಾಮ್ ।**
**ಮಾಲೇವ ಸರ್ವರತ್ನಾನಾಮ್ ವೇಲೇವ ಸುಕೃತಾಂಬುಧೇಃ ॥**

ಕಣ್ಣಿಗೆ ಹಬ್ಬ, ಸಕಲ ಸಂಪತ್ತುಗಳ ತವರುಮನೆ, ಎಲ್ಲ ಶ್ರೇಷ್ಠ ವಸ್ತುಗಳ ಮಾಲೆ ಮತ್ತು ಸುಕೃತಸಾಗರದ ಸೀಮೆಯಾಗಿತ್ತು. ಸೂರ್ಯಮಂಡಲವು ಇಲ್ಲಿಯ ಎತ್ತರವಾದ ಅರಮನೆಯ ಮೇಲಿನ ಕಳಸದಂತಿತ್ತು; ಮಾಳಿಗೆಯ ಮೇಲೆ ಆಡುವ ರಮಣಿಯರಿಗೆ ಚಂದ್ರಮಂಡಲವೇ ಚಂಡಾಗಿತ್ತು ಇತ್ಯಾದಿಯಾದ ವರ್ಣನೆ ಸಾಂಪ್ರದಾಯಕವಾಗಿದ್ದರೂ ಕೂಡ ಸರಲ ಮತ್ತು ಸರಸವಾದ ನಿರೂಪಣೆಯಿಂದಾಗಿ ಓದುಗರನ್ನು ಸೆಳೆಯುತ್ತದೆ. ವಿಜಯನಗರದ ಜನರು ದೃಢಕಾಯದವರೂ, ಅಕುಟಿಲಸ್ವಭಾವದವರೂ ನಯವಾದ ವರ್ತನೆಯುಳ್ಳವರೂ ಆಗಿದ್ದರು. ವಿರೂಪಾಕ್ಷನ ಆವಾಸಸ್ಥಳವಾದ ಪಂಪಾನಗರಿಯೂ ವಿಜಯನಗರದ ಶಾಖಾನಗರಿಯೂ. ಈ ಎರಡೂ ನಗರಗಳಿಂದ ಕೂಡಿದ ಮಹಾನಗರದಲ್ಲಿ ಆಳುತ್ತಿದ್ದ ಬುಕ್ಕರಾಜನು ವಿಂಧ್ಯದಿಂದ ಮಲಯದವರೆಗಿನ ಉದಯಾಚಲದಿಂದ ಅಸ್ತಾಚಲದವರೆಗಿನ ರಾಜ್ಯಕ್ಕೆ ಅಧಿಪತಿಯಾಗಿ 'ಕರ್ಣಾಟ ಲೋಕನಯನೋತ್ಸವ ಪೂರ್ಣಚಂದ್ರನೆನಿಸಿಕೊಂಡಿದ್ದನು' ಎಂದು ಹೇಳಿದಾಗ ನಮ್ಮ ಅಭಿಮಾನವು ಉಕ್ಕೇರಿ ಬರುವದು.

ಬುಕ್ಕರಾಯನಿಗೆ ದೇಪಾಯಿ ಎಂಬ ರಾಣಿಯಿದ್ದಳು. ಕಾಲಕ್ರಮದಲ್ಲಿ ಅವಳು ಗರ್ಭಿಣಿಯಾದಳು. ಗರ್ಭಿಣಿಯರು ಮಣ್ಣು ತಿನ್ನುವ ಪ್ರವೃತ್ತಿಯನ್ನು ಕವಯಿತ್ರಿಯು ಕಾವ್ಯಮಯವಾಗಿ ಹೀಗೆ ವರ್ಣಿಸುವಳು.

ಗರ್ಭಸ್ಥಿತಸ್ಯೈವ ಶಿಶೋರ್ವಿಧಾತುಮ್ ।
ವಸುಂಧರಾಮಂಡಲಭಾರಶಿಕ್ಷಾಮ್ ॥
ಅರೋಚಯತ್ ಪಾರ್ಥಿವಧರ್ಮಪತ್ನೀ
ಮನ್ಯೇ ಮೃದಾಸ್ವಾದರಸಾನುಬಂಧಮ್ ॥

"ಮಗು ಗರ್ಭದಲ್ಲಿರುವಾಗಲೇ ಭೂಮಂಡಲದ ಭಾರವನ್ನು ವಹಿಸುವದನ್ನು ಕಲಿಸಲು ರಾಣಿಯು ಮಣ್ಣು ತಿನ್ನಲು ಮನಸ್ಸು ಮಾಡಿದಳು ಎಂದು ನನಗೆ ಅನಿಸುವದು." ಮೊದಮೊದಲು ಬಾಡಿದ ಗರ್ಭಿಣಿ ದೇಪಾಯಿಯ ಅಂಗಗಳು ದಿನತುಂಬಿದಂತೆ ತುಂಬಿ ಕೊಂಡವು; ಕಣ್ಣುಗಳು ಅಲಸವಾದವು; ರೋಮರಾಜಿಯು ಗರ್ಭವನ್ನು ಸಂರಕ್ಷಿಸಲು ಇರುವ ಕಾಳಸರ್ಪದಂತೆ ಕಂಡಿತು; ಸ್ತನಗಳ ತುದಿ ಕಪ್ಪಾದವು; ನೀರುತುಂಬಿದ ಮೇಘದಂತೆಯೂ ಚಂದ್ರನು ಅಡಗಿದ ವ್ಯೋಮಸೀಮೆಯಂತೆಯೂ ರತ್ನ ತುಂಬಿದ ಆಕರದಂತೆಯೂ ಉಡಿ ತುಂಬಿದ ಅವಳನ್ನು ನೋಡಿ ಅರಸನು ನಲಿದಾಡಿದನು. ಪ್ರಶಸ್ತವಾದ ಒಂದು ದಿನ ಮಂಗಲವಾದ್ಯಗಳ ಘೋಷವು ಮಗುವಿನ ಜನ್ಮವೃತ್ತಾಂತವನ್ನು ಎಲ್ಲಕಡೆಗೂ ಹರಡಿತು. ಪುತ್ರ ಜನನದ ವಾರ್ತೆಯನ್ನು ಕೇಳಿ

ಅವಾಂಛದಾತ್ಮಾನಮಪಿ ಪ್ರದಾತುಮ್ ।
ಕುತೂಹಲೀ ಕುಂತಲಭೂಮಿಪಾಲಃ ॥

ಕುಂತಲೇಶನಾದ ಬುಕ್ಕನು ಸ್ವತಃ ತನ್ನನ್ನೂ ಕಾಣಿಕೆ ಕೊಡಲು ಇಚ್ಛಿಸಿದನು. ಮಗುವಿನ ಮುಖವನ್ನು ನೋಡಲು ಕೋಣೆಯಲ್ಲಿ ಪ್ರವೇಶಿಸಿದ ಅವನಿಗೆ ಬಾಡಿದ ಶರೀರದ ರಾಣಿಯ ತೊಡೆಯ ಮೇಲಿನ ಮಗುವನ್ನು ಕಂಡಾಗ ಶರತ್ಕಾಲದಲ್ಲಿ ಸೊರಗಿದ ನದಿಯ ದಂಡೆಯ ಮೇಲಿನ ಹಂಸ ಶಾವವನ್ನು ಕಂಡಂತಾಯಿತು.

ಮುಹುರ್ಮುಹುಃ ಪಲ್ಲವಪಾಟಲೇನ ।
ಮುಷ್ಟೀಕೃತೇನ ದ್ವಿತಯೇನ ಪಾಣ್ಯೋಃ ॥
ಅರಾತಿ ಲಕ್ಷ್ಮೀಕಚ ಸಂಚಯಾನಾಮ್ ।
ಆಕರ್ಷ ಶಿಕ್ಷಾಮಿವ ಶೀಲಯಂತಮ್ ॥

ಚಿಗುರೆಲೆಗಳಂತಿರುವ ಮುಷ್ಟಿಗೈಗಳನ್ನು ಎಳೆದುಕೊಳ್ಳುತ್ತಿರುವ ಮಗು ಶತ್ರುಲಕ್ಷ್ಮಿಯ ಕೂದಲುಗಳನ್ನು ಎಳೆಯುವದನ್ನು ಕಲಿಯುತ್ತಿರುವಂತೆ ಕಂಡಿತು. ಮುದ್ದಾದ ಮಗುವಿನ ಮುಖವನ್ನು ಇನ್ನಷ್ಟು ನೋಡಲು ಆನಂದಬಾಷ್ಪಗಳು ಅಡ್ಡಿಯಾದವು. ಕಾಲಕ್ರಮದಲ್ಲಿ ಮಗುವಿಗೆ "ಕಂಪಣ" ಎಂದು ವಿಧಿಪೂರ್ವಕವಾಗಿ ನಾಮಕರಣ ಮಾಡಿಸಿದನು. ಬಂಗಾರದ ಗೆಜ್ಜೆಯು ಸದ್ದುಮಾಡುತ್ತ ಮನೆತುಂಬೆಲ್ಲ ಅಂಬೆಗಾಲಿಕ್ಕುವ ಮಗುವನ್ನು ನೋಡಿದಾಗ ದೇವಾಯಿ ಬುಕ್ಕರಿಗೆ ಆನಂದಸಾಗರದಲ್ಲಿಯೇ ಮುಳುಗಿದಂತಾಗುತ್ತಿತ್ತು. ಮುಂದೆ ಕಿರಿಯ ಕಂಪಣ ಮತ್ತು ಸಂಗಮ ಎಂದು ಇನ್ನಿಬ್ಬರು ಮಕ್ಕಳಾದರು. ಸೋಮ, ಸೂರ್ಯ, ಅಗ್ನಿರೂಪವಾದ ಮೂರು ಕಣ್ಣುಗಳಿಂದ ಶಿವನಂತೆಯೂ, ಪ್ರಭು, ಉತ್ಸಾಹ, ಮಂತ್ರಶಕ್ತಿಗಳಿಂದ ರಾಜನೀತಿಯಂತೆಯೂ, ಧರ್ಮ, ಅರ್ಥ, ಕಾಮಗಳಿಂದ ಜೀವನದಂತೆಯೂ ಹಿರಿಯ ಕಂಪಣ ಕಿರಿಯ ಕಂಪಣ ಮತ್ತು ಸಂಗಮರೆಂಬ ಮೂರು ಪುತ್ರರಿಂದ ಬುಕ್ಕರಾಜನು ಶೋಭಿಸಿದನು.

ದೇವಾಯಿಯ ಗರ್ಭಧಾರಣೆ, ಪುತ್ರಜನನದ ಈ ಸಂದರ್ಭವು ಕುಟುಂಬ ಸುಖದ ವಾತಾವರಣದಿಂದ ತುಂಬಿದೆ. ಕುಟುಂಬ ಜೀವನದ ಸಿಹಿಕಹಿಗಳು ಹೆಣ್ಣುಮಕ್ಕಳಿಗೆ ತಿಳಿದಷ್ಟು ಪುರುಷರಿಗೆ ತಿಳಿಯಲಾರವೆಂಬುದು ಅನುಭವದ ಮಾತು. ಕಾವ್ಯನಿರ್ಮಾಣ ಶಕ್ತಿಯಿದ್ದ ಮಹಿಳೆಯರು ತಮ್ಮ ಅನುಭವಗಳನ್ನು ಹೇಗೆ ಬಣ್ಣಿಸು

ವರು ಎಂದು ತಿಳಿದುಕೊಳ್ಳುವ ಕುತೂಹಲವಿರುವದು ಸಹಜ. ಗಂಗಾದೇವಿಯ ಕೃತಿಯು ಇಂಥ ಕುತೂಹಲವನ್ನು ತೃಪ್ತಿಪಡಿಸುವದು. ಬಸಿರು, ಬಯಕೆ, ಪುತ್ರಜನನ, ಮಕ್ಕಳಾಟದ ಆನಂದದ ಸನ್ನಿವೇಶಗಳು ತುಂಬ ಹೃದಯಗ್ರಾಹಿಯಾಗಿ ಇಲ್ಲಿ ವರ್ಣಿಸಲ್ಪಟ್ಟಿವೆ.

ಕಂಪಣನು ದೊಡ್ಡವನಾದಂತೆ ಎಲ್ಲ ಕಲೆಗಳಲ್ಲಿಯೂ, ಶಸ್ತ್ರವಿದ್ಯೆಗಳಲ್ಲಿಯೂ ಪರಿಣತನಾದನು. ಸತ್ಯವಾದಿಯೂ ಬಲಿಷ್ಠನೂ ಧನುರ್ವಿದ್ಯೆ, ಅಶ್ವವಿದ್ಯೆಗಳಲ್ಲಿ ಬಲ್ಲಿದನೂ ಆದ ಅವನೊರ್ವನೇ ಪಂಚಪಾಂಡವರ ಸಂಘಾತದಂತಾದನು.

ಸ್ತ್ರೀಯರ ತಾರುಣ್ಯದ ವರ್ಣನೆಗಳು ಸಂಸ್ಕೃತ ಕಾವ್ಯಗಳಲ್ಲಿ ವಿಪುಲವಾಗಿವೆ. ಪುರುಷರ ದೇಹವರ್ಣನೆಗಳು ಅದರಲ್ಲಿಯೂ ಸ್ತ್ರೀಯರು ಮಾಡಿದವು ವಿರಳ. ಆದುದರಿಂದ ಗಂಗಾದೇವಿಯು ಮಾಡಿದ ಕಂಪಣನ ತಾರುಣ್ಯದ ವರ್ಣನೆಯನ್ನು ಓದಲು ವಾಚಕರು ಧಾವಿಸುವದು ಸಹಜ. ಆದರೆ ಸಂಸ್ಕೃತ ಕವಿಗಳ ಗತಾನುಗತಿಕವಾದ ಮಾರ್ಗವನ್ನನುಸರಿಸಿ ಪಾದದಿಂದ ಮಸ್ತಕದವರೆಗಿನ ಅವಳು ಮಾಡಿದ ವರ್ಣನೆಯು ನೀರಸವಾಗಿದೆ. ಹೊಸದಾದ ಹೋಲಿಕೆಯಾಗಲೀ, ಕಲ್ಪನೆಯ ಚಾಕಚಕ್ಯತೆಯಾಗಲೀ ಕಂಡುಬರುವದಿಲ್ಲ. ಮನಸ್ಸುತುಂಬಿ ಮಾಡಿದ ಸ್ವಾಭಾವಿಕವರ್ಣನೆ ತೋರಿಬರುವದಿಲ್ಲ. "ಚಂದ್ರನ ಕಲಂಕವು ನಟ್ಟನಡುವಿರದೆ ತುಸು ನೀಳಾಗಿ ಹೊರಗೆ ಇಣಿಕಿದ್ದರೆ ಕುಡಿಮೀಸೆಯು ಅವನ ಮುಖವನ್ನು ಚಂದ್ರಬಿಂಬವು ಹೋಲಬಹುದಿತ್ತೇನೋ' ಎಂಬ ಒಂದೇ ಒಂದು ಕಲ್ಪನೆ ಸೊಗಸಾಗಿದೆ.

ತಂದೆ ಬುಕ್ಕನು ಕಂಪಣ್ಣನಿಗೆ ಅನೇಕ ರಾಜಕನ್ನೆಯರನ್ನು ತಂದು ಮದುವೆಮಾಡಿದನು ಎಂದು ಹೇಳಿ ಮುಂದಿನ ಪದ್ಯದಲ್ಲಿ ಅವರಲ್ಲಿ ಓರ್ವಳು ಇಂದ್ರನಿಗೆ ಶಚಿಯಂತೆಯೂ, ವಿಷ್ಣುವಿಗೆ ರಮೆ

ಯಂತೆಯೂ ಶಿವನಿಗೆ ಸತಿಯಂತೆಯೂ ಎಂದು ಹೇಳಲು ಹೊರ ಟಿದ್ದು, ನಮಗೆ ಉಪಲಬ್ಧವಿದ್ದ ಗ್ರಂಥದಲ್ಲಿ ಆ ಪದ್ಯದ ಮುಂದಿನ ಭಾಗವು ತ್ರುಟಿತವಾಗಿದೆ. ಅದುದರಿಂದ ಅವಳು ಯಾರು? ಕಂಪರಾಯಚರಿತೆಯನ್ನು ಬರೆದ ಗಂಗಾದೇವಿಯೋ ಅಥವಾ ಬೇರೊಬ್ಬರೇ? ಗಂಗಾದೇವಿಯು ಮುಖ್ಯ ರಾಣಿಯಾಗದಿದ್ದರೂ ರಾಣಿಯರಲ್ಲಿ ಓರ್ವಳಾಗಿದ್ದಳೇ ಅಥವಾ ಕೇವಲ ಪ್ರಿಯೆಯಾಗಿದ್ದಳೇ ಎಂಬುದಾವುದೂ ತಿಳಿಯುವದಿಲ್ಲ. ಮುಂದೆ ಏಳನೆ ಸರ್ಗದಲ್ಲಿ ಕಂಪಣನು ತನ್ನ ಪ್ರಿಯೆ ಗಂಗಾದೇವಿಗೆ ಚಂದ್ರೋದಯದ ವರ್ಣನೆ ಮಾಡಲು ಹೇಳಿದನು ಎಂದಿಷ್ಟು ಮಾತ್ರ ಹೇಳಿದೆ ಕವಯಿತ್ರಿ ಗಂಗಾದೇವಿಯು ತನ್ನ ವಿಷಯದಲ್ಲಿಯಾಗಲೀ ತನ್ನ ತವರಿನ ವಿಷಯದಲ್ಲಾಗಲೀ ಏನನ್ನೂ ಹೇಳುವದಿಲ್ಲ.

ತರುಣನಾದ ಕಂಪಣನಿಗೆ ತಂದೆ ಬುಕ್ಕರಾಯನು ಹೇಳಿದ ಹಿತವಚನಗಳು ತುಂಬ ಮಾರ್ಮಿಕವಾಗಿವೆ. "ಹಿರಿಯರ ಹಿತವಚನ ಗಳು ಕಿವಿಗೆ ರತ್ನದ ಕುಂಡಲಗಳಿದ್ದಂತೆ ಮದಾಂಧರಾದವರು ಮಾತ್ರ ಮದವೇರಿದ ಆನೆಗಳಂತೆ ನಿಯಂತ್ರಕರ ಮಾತು ಕೇಳು ವದಿಲ್ಲ; ಅಹಂಕಾರಿಗಳ ದೃಷ್ಟಿಯು ನಿರ್ದುಷ್ಟವಾದದ್ದನ್ನು ಕಾಣದು; ಅಂಥವರನ್ನು ಆಪತ್ತುಗಳು ಆವರಿಸುವವು; ಸ್ತ್ರೀ, ಮೃಗಯಾ, ಮದಿರೆಗಳು ಸರ್ವಸ್ವವನ್ನೂ ಹಾಳುಮಾಡುವವು; ಪ್ರಜೆಗಳಿಗೆ ನಿಷ್ಠುರ ಮಾತುಗಳನ್ನಾಡಬಾರದು; ಪ್ರಜೆಗಳ ಮೇಲೆ ಅತಿಯಾದ ದಂಡೋಪಾಯವನ್ನು ಪ್ರಯೋಗಿಸುವದೆಂದರೆ ತಾನು ಹತ್ತಿದ ಗಿಡದ ಟೊಂಗೆಯನ್ನು ತಾನೇ ಕಡಿದುಕೊಂಡಂತೆ; ಅಯೋಗ್ಯರಾದವರಿಗೆ ರಾಜಾನುಗ್ರಹವನ್ನು ತೋರಿಸುವದು ಯಜ್ಞಾಗ್ನಿಕುಂಡದಲ್ಲಿ ಹಾಕಬೇಕಾದ ಹವಿಸ್ಸನ್ನು ಸ್ಮಶಾನ ಚಿತೆ ಯಲ್ಲಿ ಹಾಕಿದಂತೆ; ಇದೆಲ್ಲವನ್ನು ತಿಳಿದುಕೊಂಡು ರಾಜ್ಯಕ್ಕೆ

ಸ್ಥೈರ್ಯ ಬರುವಂತೆ ವರ್ತಿಸು" ಎಂದುಪದೇಶಿಸಿ ನಮ್ಮ ಅನುಯಾಯಿಗಳಾದ ಮಾಂಡಲಿಕ ರಾಜರನ್ನು ಮತ್ತು ಅಪಾರವಾದ ಈ ಸೈನ್ಯವನ್ನು ತೆಗೆದುಕೊಂಡು ತುಂಡೀರ ದೇಶದ ಮೇಲೆ ದಂಡೆತ್ತಿ ಹೋಗಿ ಚಂಪರಾಯನನ್ನು ಸದೆಬಡಿದು ಕಂಚಿಯನ್ನು ಆಳು ಹಾಗೂ ವನ್ಯರಾಜರನ್ನೂ ತುರುಷ್ಕರನ್ನೂ ಸದೆಬಡೆ ಎಂದು ಆಜ್ಞಾಪಿಸುವನು.

ತಂದೆಯ ಆಜ್ಞೆಯಂತೆ ಕಂಪಣರಾಯನು ದಿಗ್ವಿಜಯಕ್ಕೆ ಅಣಿಯಾಗುವನು. ಪ್ರಯಾಣದ ದುಂದುಭಿಯ ಧ್ವನಿಗೆ ಅಂಜಿ ಕಣ್ಣು ಮುಚ್ಚಿದ ಆದಿಶೇಷನು ಏಕಕಾಲಕ್ಕೆ ಕುರುಡನೂ ಕಿವುಡನೂ ಆಗಬೇಕಾಯಿತು. ಅಸಂಖ್ಯ ಸೈನಿಕರು ಮತ್ತು ಮಾಂಡಲಿಕರಾಜರನ್ನು ಕೂಡಿಕೊಂಡು ಕಂಪಣರಾಯನು ಕರ್ನಾಟಕ ಸೀಮೆಯನ್ನು ಐದಾರು ದಿನಗಳಲ್ಲಿ ದಾಟಿ ಕಂಟಕಾನನ ಪಟ್ಟಣವನ್ನು ತಲುಪುವನು. ಅಲ್ಲಿ ಕೆಲಕಾಲವಿದ್ದು ಯುದ್ಧಕ್ಕೆ ಕಾಲವು ಪಕ್ವವೆನಿಸಿದೊಡನೆ ಕ್ಷೀರತರಂಗಿಣಿಯ ದಂಡೆಯ ಮೇಲಿದ್ದ ವಿರಿಂಚಿ ನಗರದ ಹತ್ತಿರ ಬೀಡು ಬಿಟ್ಟು ದ್ರಮಿಡ ರಾಜನನ್ನು ಎದುರಿಸುವನು

**ಪಾದಾತ ಪ್ರಾಪ್ತ ಪಾದಾತಮ್ ಹಾಸ್ತಿಕಾಕ್ರಾಂತ ಹಾಸ್ತಿಕಮ್ ॥**
**ಆಶ್ವೀಯಮಿಲಿತಾಶ್ವೀಯಮಾಸೀದಾಯೋಧನಮ್ ತಯೋಃ ॥**

ಎರಡು ಪಕ್ಷಗಳ ಕಾಲಾಳು, ಆನೆ ಕುದುರೆಗಳ ಸೈನ್ಯಗಳು ಪರಸ್ಪರ ಸಂಧಿಸಿದವು; ರಕ್ತರಂಜಿತವಾದ ಖಡ್ಗಗಳ ಅಲಗುಗಳು ಯಮನ ನಾಲಗೆಗಳಂತೆ ಮುಂದೆ ಬಂದವು; ಕತ್ತರಿಸಿ ಬಿದ್ದ ವೀರರ ತೋಳುಗಳನ್ನು ಹಾವುಗಳೆಂದು ಗಿಡಗಗಳು ಭಾವಿಸಿದವು; ಬಾಣಗಳ ಗುರಿಗೆ ತುತ್ತಾಗಿ ಮಡಿದು ಆನೆಗಳ ತಲೆಗಳ ಮೇಲೆ ಒರಗಿದ ಶತ್ರು ಸೈನಿಕರು ಸ್ವರ್ಗ ಕಂಡು ಕಣ್ಣು ತೆರೆದು ನೋಡಿದಾಗ ಅಪ್ಸರೆಯರ ಕುಚಕುಂಭಗಳ ಮೇಲೆ ಒರಗಿದ್ದರು; ಕಂಪಣ

ರಾಯನ ಸೈನಿಕರ ಬಲಕ್ಕೆ ತಡೆಯದೆ ದ್ರವಿಡ ಸೈನ್ಯವು ದಿಕ್ಕೆಟ್ಟು ಓಡಿತು.

ಛಾಯಾಮೇವಾತ್ಮನಃ ಕೇಚಿತ್ ಧಾವಂತೋ ಭೀತಿಭಾವಿತಾಃ ।
ಆರಾತಿ ಶಂಕಯಾ ಕಷ್ಟಮ್ ದೃಷ್ಟಾಂಗುಲಿ ವವಂದಿರೇ ॥

ಓಡುತ್ತಿದ್ದ ಸೈನಿಕರು ತಮ್ಮ ನೆರಳನ್ನೇ ಶತ್ರುಗಳೆಂದು ಭಾವಿಸಿ ಬಟ್ಟೆಕಚ್ಚಿಕೊಂಡು ನಮಸ್ಕರಿಸಿದರು. ಕಂಪರಾಯನು ಶತ್ರುಗಳನ್ನು ಬೆನ್ನಟ್ಟಿ ಅವರು ಆಶ್ರಯಿಸಿದ ರಾಜಗಂಭೀರಕ್ಕೆ ಮುತ್ತಿಗೆ ಹಾಕಿದನು. ಸೈನಿಕರ ಪ್ರತಿಧ್ವನಿಯಿಂದ ಗಿರಿರಾಜನು ಇವನನ್ನು ಕರೆಯುತ್ತಿರುವಂತೆ ಕಂಡಿತು. ಶಸ್ತ್ರಗಳ ಜ್ವಾಲೆ ಅಡವಿಯ ತುಂಬೆಲ್ಲ ಹಬ್ಬಿತು. ತಾಳೆಯ ಮರಗಳಿಂದ ಹಣ್ಣುಗಳು ದುರುವಂತೆ ಶತ್ರುಸೈನಿಕರ ರುಂಡಗಳು ಕೆಳಕ್ಕುರುಳಿದವು. ಕೊನೆಯ ಉಪಾಯವೆಂದು ಚಂಪರಾಯನು ಸ್ವತಃ ಹೊರಕ್ಕೆ ಬಂದನು. ಚಂಪ ಮತ್ತು ಕಂಪರು ಪರಸ್ಪರರನ್ನು ಎದುರಿಸಿದರು. ಕ್ಷಣಾರ್ಧದಲ್ಲಿಯೇ ಕಂಪನು ಚಂಪನನ್ನು ಯಮಸದನಕ್ಕೆ ಅಟ್ಟಿದನು. ತಂಡೀರದೇಶವು ಕಂಪನ ಕೈವಶವಾಯಿತು.

ಚಂಪರಾಯನನ್ನು ಸದೆಬಡೆದು ಕಾಂಚೀನಗರದಲ್ಲಿ ಜಯ ಪ್ರಶಸ್ತಿಯನ್ನು ಕೆತ್ತಿಸಿ ಕಂಪನು ಮರತಕ ನಗರದಲ್ಲಿ ನೆಲೆಸಿ ಕೆಲಕಾಲ ರಾಜ್ಯಭಾರ ಮಾಡುವನು. ಕವಯಿತ್ರಿಯು ಕಂಪನ ರಾಜ್ಯಭಾರದ ರೀತಿಯನ್ನು ಔಚಿತ್ಯಪೂರ್ಣವಾಗಿ ವರ್ಣಿಸಿದ್ದಾಳೆ. ಶತ್ರುಗಳ ದೇಶದಲ್ಲಿ ರಾಜ್ಯಭಾರವನ್ನಾರಂಭಿಸಿದ ಅವನು ತುಂಬ ಜನಪ್ರಿಯನಾಗಿದ್ದನು ಆದರೆ ಜಾಗರೂಕನೂ ಆಗಿದ್ದನು. ಅವನು ಹೇರಿದ ಕರಭಾರಗಳು ಸೌಮ್ಯವಾಗಿದ್ದವು. ದೇಶವೆಲ್ಲ ಸಸ್ಯಗಳಿಂದ ತುಂಬಿ ಸಂತೋಷದಿಂದ ಪುಲಕಿತವಾದಂತೆ ಕಂಡುಬರತ್ತಿತ್ತು. ಅನೇಕ ಸಾಮಂತರಾಜರು ಇವನ ಭೆಟ್ಟಿಗಾಗಿ ಕಾದಿರುತ್ತಿದ್ದರು.

ಕವಿಗಳು ಗಮಕಿಗಳು ಇವನ ಆಸ್ಥಾನದಲ್ಲಿದ್ದರು. ನೃತ್ಯಗೀತ ಮೊದಲಾದ ಲಲಿತಕಲೆಗಳಲ್ಲಿಯೂ ಬೇಟೆ ಮೊದಲಾದ ವೀರೋಚಿತವಾದ ವಿನೋದಗಳಲ್ಲಿಯೂ ಕಾಲವನ್ನು ಕಳೆಯುತ್ತಿದ್ದನು.

ರಾಜನು ಮರತಕ ನಗರದಲ್ಲಿದ್ದಾಗಿನ ಸಂದರ್ಭಗಳನ್ನು ವರ್ಣಿಸುತ್ತ ಗಂಗಾದೇವಿಯು ಮಹಾಕಾವ್ಯದ ಲಕ್ಷಣದಲ್ಲೊಂದಾದ ಋತುವರ್ಣನೆಗೆ ತೊಡಗುವಳು. ಐದನೆಯ ಸರ್ಗದ ಬಹುಭಾಗವೆಲ್ಲ ಋತುಗಳ ವರ್ಣನೆಯಿಂದಲೇ ತುಂಬಿದೆ ಈ ವರ್ಣನೆಯು ಕವಯಿತ್ರಿಗೆ ಸಂಸ್ಕೃತ ಭಾಷೆಯಮೇಲಿರುವ ಪ್ರಭುತ್ವವನ್ನು ತೋರಿಸುತ್ತದೆ. ವರ್ಣನೆ ಸಾಮಾನ್ಯವಾಗಿ ಹಿಂದಿನ ಕವಿಗಳ ರೀತಿಯನ್ನೇ ಅನುಸರಿಸಿದ್ದಾಗಿದೆ. ಅಲ್ಲಲ್ಲಿ ಕೆಲ ಹೊಸ ಕಲ್ಪನೆಗಳು ಮೂಡಿಬಂದಿವೆ. ಋತುವರ್ಣನೆಯ ನಂತರ ವನಕೇಲಿಯನ್ನೂ ಜಲಕೇಲಿಯನ್ನೂ ಕವಯಿತ್ರಿಯು ಸೊಗಸಾಗಿ ವರ್ಣಿಸಿದ್ದಾಳೆ. ಆದರೆ ಈ ಸರ್ಗದ ಬಹು ಭಾಗವು ಹಸ್ತಪ್ರತಿಯಲ್ಲಿ ತ್ರುಟಿತವಾಗಿದ್ದು ಕೆಲವೇ ಶ್ಲೋಕಗಳು ದೊರೆಯುತ್ತವೆ ಉಪಲಬ್ಧವಿದ್ದ ಪದ್ಯಗಳಲ್ಲಿ ಗೆಳತಿಯರು ಒಬ್ಬರಿಗೊಬ್ಬರು ಗೇಲಿಮಾಡುವ ಮಾತುಗಳು ರಸಭರಿತವಾಗಿವೆ.

ಏಳನೆಯ ಸರ್ಗದಲ್ಲಿ ಬರುವ ಸೂರ್ಯಾಸ್ತ, ಕತ್ತಲೆ ಕವಿಯುವದು ಮತ್ತು ಚಂದ್ರೋದಯದ ವರ್ಣನೆಗಳು ಇಡೀ ಕಾವ್ಯದಲ್ಲಿಯೇ ತುಂಬ ಆಕರ್ಷಕವಾದ ಸನ್ನಿವೇಶಗಳು. ಅಪೂರ್ವವಾದ ಕಲ್ಪನೆಗಳು, ಲಲಿತವಾದ ನಿವೇದನೆ, ಸರಲವೂ ಸುಂದರವೂ ಆದ ಶೈಲಿಯಿಂದ ಕೂಡಿದ ಈ ಭಾಗವು ಸಂಸ್ಕೃತ ಸಾಹಿತ್ಯದ ರಸವತ್ತಾದ ಭಾಗಗಳಲ್ಲಿ ಒಂದಾಗಿದೆ.

ಸಂಧ್ಯಾಕಾಲದಲ್ಲಿ ಸಮುದ್ರದಲ್ಲಿ ಕಳಚಿ ಬಿದ್ದ ಸೂರ್ಯ

ಮಂಡಲವನ್ನು ವರುಣಲೋಕದ ಸ್ತ್ರೀಯರು ದಿನಲಕ್ಷ್ಮಿಯ ಕರ್ಣ ಕುಂಡಲವೆಂದು ಭಾವಿಸಿದರಂತೆ ".

"ಕಮಲಗಳ ಉದರದಲ್ಲಿದ್ದ ಮಧು ( ಮದ್ಯ ) ವನ್ನು ಕುಡಿದು ರವಿಯು ಅಂಬರ ( ಬಟ್ಟೆ ) ವನ್ನು ಬಿಟ್ಟು ಪಶ್ಚಿಮ ದಿಗ್ವಧುವಿನ ಕಡೆಗೆ ಸಾಗಿದನು. ಮದವು ಯಾರಿಗೆ ವಿಕಾರವನ್ನುಂಟುಮಾಡ ಲಾರದು ? "

" ಪೂರ್ವ ದಿಗ್ವಧುವನ್ನು ಬಿಟ್ಟು ದೂರ ಸರಿದಂತೆ ಸೂರ್ಯನ ( ವಿರಹ ) ತಾಪವು ಹೆಚ್ಚಿತು. ಆದರೆ ಪಶ್ಚಿಮ ದಿಗ್ವಧುವಿನ ಹತ್ತಿರ ಸರಿದಂತೆ ಅದು ಮರೆಯಾಯಿತು. ಕಾಮಿಗಳ ಹೃದಯದ ರೀತಿಯನ್ನು ಯಾರು ಬಲ್ಲರು ? "

" ಸಂಜೆಗೆ ಮುದುಡಿಯಾಗುವ ಕಮಲದ ಮೊಗ್ಗೆಗಳಿಂದ ಕಮಲಿನಿಯು ಹೊರಟುನಿಂತ ಸೂರ್ಯನಿಗೆ ಮತ್ತೆ ಬೇಗನೆ ಬರಬೇಕೆಂದು ಕೈಜೋಡಿಸಿದಳು."

"ಗಾಳಿಗೆ ಚಲಿಸುವ ಸಮುದ್ರದ ತೆರೆಗಳಲ್ಲಿ ಮೂಡಿದ ಸೂರ್ಯನ ಪ್ರತಿಬಿಂಬದಿಂದಾಗಿ ಸೂರ್ಯನು ಮೆಟ್ಟಿಲುಗಳಿಂದ ಇಳಿಯುತ್ತಿದ್ದಂತೆ ಭಾಸವಾಗುತ್ತದೆ. "

"ತೆರೆಗಳಲ್ಲಿ ಮೂಡಿದ ಸೂರ್ಯಮಂಡಲದ ಪ್ರತಿಬಿಂಬಗಳನ್ನು ಮೀನಗಳು ಹಣ್ಣಿನ ತುಂಡುಗಳೆಂದು ಕಚ್ಚಿದವು."

ಎಂದು ಅನೇಕ ವಿಧವಾದ ಹೊಸ ಕಲ್ಪನೆಗಳನ್ನು ಗಂಗಾ ದೇವಿಯು ಮಾಡಿರುವಳು.

ಸೂರ್ಯನು ಮುಳುಗಿ, ಕತ್ತಲು ಕವಿದು, ನಕ್ಷತ್ರಗಳು ಹರಡಿದ ಬಾನನ್ನು ಕಂಡು.

ಅವಪತ್ ಖಲು ಕಾಲಕರ್ಷಕಃ ।
ತಿಮಿರಾಂಭಃ ಕಲುಷೇ ನಭಸ್ತಲೇ ॥
ವಿಮಲಾಮುಡುಬೀಜಮಂಡಲೀಮ್ ।
ನವಚಂದ್ರಾತಪಸಸ್ಯಸಿದ್ಧಯೇ ॥

ಕಾಲನೆಂಬ ರೈತನು ಕತ್ತಲು ಕವಿದ ಮುಗಿಲೆಂಬ ಕರುಭೂಮಿಯಲ್ಲಿ ತಿಂಗಳ ಬೆಳಕಿನ ಪೈರು ಬೆಳೆದುಕೊಳ್ಳಲು ತಾರೆಗಳನ್ನು ಬಿತ್ತಿರುವನೆಂಬ ಕಲ್ಪನೆ ಕರುನಾಡಿನ ಕನ್ನಡಿತಿ ಗಂಗಾದೇವಿ ಮೂಡಿಸಿದುದು ಎಷ್ಟು ಸೊಗಸಾಗಿದೆ !

ಸಂಜೆಗೆ ಮನೆಮನೆಗೆ ಹೊತ್ತಿಸಿದ ದೀಪಗಳು ತಂದೆ ಹಗಲು ಹೋದ ಮೇಲೆ ತಾಯಿ ರಾತ್ರಿಗೆ ಸುತ್ತುವರಿದ ಮಕ್ಕಳೆಂದು ನಮ್ಮ ಕವಯಿತ್ರಿಯು ಹೆಣ್ಣುಹೃದಯದ ಉತ್ಪ್ರೇಕ್ಷೆಯಾಗಿದೆ.

ಪತಿ ಕಂಪರಾಯನು ಚಂದ್ರೋದಯವನ್ನು ವರ್ಣಿಸು ಎಂದು ಹೇಳಿದಾಗ ಚಂದ್ರೋದಯದ ವರ್ಣನೆಯನ್ನು ಆರಂಭಿಸುತ್ತಿರುವ ತನ್ನ ಶಬ್ದಚಿತ್ರವನ್ನು

ಇತಿ ಸಾ ದಯಿತೇನ ಭಾಷಿತಾ ।
ದರನಮ್ರಮ್ ದಧತೀ ಮುಖಾಂಬುಜಮ್ ॥
ವದತಿ ಸ್ಮ ಶನೈಃ ಶುಚಿಸ್ಮಿತಾ ।
ಸರಸೋದಾರಪದಾಮ್ ಸರಸ್ವತೀಮ್ ॥

ಎಂದು ಸೊಗಸಾಗಿ ಕೊಟ್ಟಿದ್ದಾಳೆ. " ಸರಸೋದಾರಪದಾ ಸರಸ್ವತೀ " ಎಂಬ ಮಾತು ಅವಳ ಇಡೀ ಕಾವ್ಯಕ್ಕೇ ಅನ್ವಯಿಸುತ್ತದೆ. ಅವಳ ಲಜ್ಜಾಮಧುರವಾದ ವರ್ತನೆಯು ಅವಳ ವ್ಯಕ್ತಿತ್ವದ ಕಲ್ಪನೆಯನ್ನು ತಂದುಕೊಡುತ್ತದೆ. ಕಾವ್ಯವನ್ನು ಓದುತ್ತಿದ್ದಂತೆ ಅವಳ ವ್ಯಕ್ತಿತ್ವದ ಬಗ್ಗೆ ಅನೇಕ ಕಲ್ಪನೆಗಳು ಸುಳಿದು ಹೋಗುತ್ತವೆ. ಅವಳ ವಿದ್ವತ್ತೆಯೂ ಸರಸತೆಯೂ ವಿನಯವೂ

ಒಮ್ಮೆ ಕಣ್ಣಮುಂದೆ ಬಂದುಹೋದರೆ ಇನ್ನೊಮ್ಮೆ ಅವಳು ವರ್ಣನೆ ಯಲ್ಲಿ ತೋರಿಸುವ ಧಾರ್ಷ್ಟ್ಯವೂ ತುಟಿ ಮೀರಿದ ಶೃಂಗಾರದ ಮಾತುಗಳೂ ಕಂಪರಾಯನು ಅವಳ ಕವಿತ್ವ ಮತ್ತು ರಸಿಕತೆಗೆ ಮೆಚ್ಚಿ ತನ್ನ ಅಂತಃಪುರಕ್ಕೆ ಸೇರಿಸಿಕೊಂಡ ಪ್ರಿಯೆಯಾಗಿರಬಹು ದೆಂಬ ಭಾವನೆಯನ್ನುಂಟುಮಾಡುತ್ತವೆ. ರಾಜನೀತಿ ಮತ್ತು ರಾಜ್ಯಕಾರ್ಯವನ್ನು ನಿರ್ವಹಿಸುವ ವಿಷಯದಲ್ಲಿ ಅವಳಾಡುವ ಮಾತು, ಅವಳ ರಾಜಕೀಯ ಪರಿಜ್ಞಾನಗಳು, ಅವಳಿಗಿರುವ ನಿಕಟ ವಾದ ರಾಜಕುಲ ಸಂಬಂಧವನ್ನು ಸೂಚಿಸುತ್ತವೆ. ಆದರೆ ಕಾವ್ಯ ದಲ್ಲಿ ಎಲ್ಲಿಯೂ ಅವಳ ತವರಿನ ಉಲ್ಲೇಖವಾಗಲೀ ಅವಳು ರಾಣಿ ಎಂಬ ಮಾತಾಗಲೀ ಬಾರದಿರುವದು ಅವಳು ಸಾಮಾನ್ಯ ಕುಲದವ ಳಿದ್ದು ವಿದ್ವತ್ತೆ ಮತ್ತು ರಸಿಕತೆಯಿಂದ ರಾಜಕುಲ ಸಂಬಂಧವನ್ನು ಪಡೆದಿರಬಹುದೆಂಬ ಊಹೆಗೆ ಅವಕಾಶ ಕೊಡುತ್ತವೆ. ಅವಳ ಪರಿ ಣತವಾದ ಲೋಕಾನುಭವ, ಪ್ರೌಢ ಮಹಿಳೆಗೆ ಸಲ್ಲುವ ವರ್ಣನೆ ಗಳು, ದೋಹದ, ಮಕ್ಕಳಾಟಗಳ ವರ್ಣನೆ, ತಾಯಿ ಮಕ್ಕಳ ಉತ್ಪ್ರೇಕ್ಷೆಗಳು ಪ್ರೌಢವಯಸ್ಸಿನಲ್ಲಿ ಕಾವ್ಯವನ್ನು ಬರೆದಿರುವದನ್ನು ಸೂಚಿಸುತ್ತವೆ. ಶೃಂಗಾರದ ಭಾಗಗಳು ಅವಳ ರಸಿಕ ವೃತ್ತಿಯನ್ನು ತೋರಿಸಿದಂತೆ ಯುದ್ಧ ಮತ್ತು ಮಧುರೆಯ ದುರವಸ್ಥೆಯ ವರ್ಣನೆ ಗಳು ಅವಳ ವೀರವೃತ್ತಿ ಮತ್ತು ದೇಶಪ್ರೇಮವನ್ನು ವ್ಯಕ್ತಪಡಿ ಸುತ್ತವೆ.

ಅವಳ ಸೂರ್ಯಾಸ್ತದ ವರ್ಣನೆಯಂತೆ ಚಂದ್ರೋದಯದ ವರ್ಣನೆಯೂ ಅನೇಕ ಹೊಸ ಕಲ್ಪನೆಗಳಿಂದ ತುಂಬಿದೆ.

“ ರಾತ್ರಿಯು ಚಂದ್ರಮಂಡಲವೆಂಬ ಚಿಕ್ಕ ಪೆಟ್ಟಿಗೆಯಿಂದ ತೆಗೆದು ಕೊಟ್ಟ ಬಿಳಿ ರೇಶಿಮೆಯ ಪತ್ತಲವನ್ನು ದಿಗ್ವಧು ಧರಿಸು ತ್ತಿರುವಳು. ”

"ದಿಗ್ವಧುವನ್ನು ಅಪ್ಪಿಕೊಂಡಿರುವ ಈ ಚಂದ್ರನು ಕುಮುದಿನಿಯ ಕಡೆಗೂ ಕೈಚಾಚುತ್ತಿರುವನು; ಕಾಮಿಗಳು ನಂಬಿಕೆಗೆ ಅರ್ಹರಲ್ಲ."

"ಕಾಮಿ ಚಂದ್ರನು ತನ್ನ ಕರಗಳನ್ನು ಎಷ್ಟೇ ಚಾಚಿದರೂ ಸೂರ್ಯವಿಕಾಸಿನೀ ಕಮಲಿನಿಯು ಮುಖವನ್ನು ಮುದುಡಿ ಕೊಂಡೇ ಇರುವಳು. ಇದು ಅವಳ ಪತಿವ್ರತಾ ಸ್ವಭಾವವನ್ನು ತೋರಿಸುವದು."

ಇತ್ಯಾದಿಯಾಗಿ ಕವಯಿತ್ರಿಯು ಹಲವಾರು ಹೊಸ ಕಲ್ಪನೆ ಗಳನ್ನು ಮಾಡಿರುವಳು.

ರಾಜನು ಮರತಕನಗರದಲ್ಲಿ ಕೆಲಕಾಲವನ್ನು ಸುಖವಾಗಿ ಕಳೆದುದನ್ನು ವರ್ಣಿಸಿ ಮುಂದಿನ ಸರ್ಗದಲ್ಲಿ ಕವಯಿತ್ರಿಯು ಮಧುರೆಯ ದಂಡಯಾತ್ರೆಗೆ ಪೂರ್ವಭೂಮಿಕೆಯಾಗಿ ಮುಸಲ್ಮಾನರ ದಾಳಿಯಿಂದಾದ ದಕ್ಷಿಣಭಾರತದಲ್ಲಿಯ ಪ್ರಸಿದ್ಧ ಕ್ಷೇತ್ರಗಳ, ಅಗ್ರಹಾರಗಳ ಮತ್ತು ದೇವಾಲಯಗಳ ದುರವಸ್ಥೆಯನ್ನು ವರ್ಣಿಸಿ ರುವಳು. ಈ ವರ್ಣನೆಯಲ್ಲಿಯ ಮಧುರೆಯ ದುರವಸ್ಥೆಯ ವರ್ಣನೆಯು ವರೆಗಿನ ಭಾಗವು ಹಸ್ತಪ್ರತಿಯಲ್ಲಿ ತ್ರುಟಿತವಾಗಿಹೋಗಿದೆ.

**ಮಧುರೋಪವನಮ್ ನಿರೀಕ್ಷ್ಯ ದೂಯೇ ।**
**ಬಹುಶಃ ಖಂಡಿತನಾಲಿಕೇರಷಂಡಮ್ ॥**
**ಪರಿತೋ ನೃಕರೋಟಿಕೋಟಿಹಾರ-**
**ಪ್ರಚಲಚ್ಛೂಲ ಪರಂಪರಾ ಪರೀತಮ್ ॥**

"ತೆಂಗಿನ ಮರಗಳೆಲ್ಲ ಕಡಿಯಲ್ಪಟ್ಟು ತಲೆಬುರುಡೆಗಳು ಜೋತಾಡುವ ಶೂಲದ ಕಂಬಗಳಿಂದ ತುಂಬಿದ ಮಧುರೆಯ ಉದ್ಯಾನಗಳನ್ನು ನೋಡಿ ನನ್ನ ಮನಸ್ಸು ನೋಯುತ್ತದೆ." ಎಂದು ಮಧುರೆಯ ದುರ್ದಶೆಯ ಚಿತ್ರವನ್ನು ಮಧುರೆಯ ಅಧಿದೇವತೆಯು ಕಂಪಣನಿಗೆ ವಿವರಿಸತೊಡಗುವಳು."

" ಮಧುರೆಯ ರಾಜಬೀದಿಗಳಲ್ಲಿ ರಮಣಿಯರ ಪೈಜಣದ ಧ್ವನಿಯು ಮೊದಲು ಕೇಳುಬರುತ್ತಿತ್ತು; ಈಗ ನಾಗರಿಕರಿಗೆ ಹಾಕಿದ ಕೈಬೇಡಿಗಳ ಸಪ್ಪಳ ಕಿವಿಗೆ ಚುಚ್ಚುತ್ತದೆ. "

" ಗೋಪುರಗಳ ಮೇಲೆ ಕೆತ್ತಿದ ಗೊಂಬೆಗಳ ಮೇಲೆ ಹಬ್ಬಿದ ಜಾಡವು ಜೀವ ಕಳೆದುಕೊಂಡ ಅವುಗಳ ಮೇಲೆ ಬಿಳಿಬಟ್ಟೆ ಬಟ್ಟೆಯನ್ನೆಳೆದಂತೆ ಭಾಸವಾಗುತ್ತದೆ."

ನ ತಥಾ ಕಟುಘೂತ್ಕೃತಾದ್ ವ್ಯಥಾ ಮೇ ।
ಹೃದಿ ಜೀರ್ಣೋಪವನೇಷು ಘೂಕಲೋಕಾತ್ ॥
ಪರಿಶೀಲಿತಪಾರಸೀಕವಾಗ್ಭ್ಯೋ
ಯವನಾನಾಮ್ ಭವನೇ ಯಥಾ ಶುಕೇಭ್ಯಃ ॥

" ಹಾಳು ತೋಟಗಳಲ್ಲಿ ಕೂಗುತ್ತಿರುವ ಗೂಗೆಗಳ ಧ್ವನಿಗಿಂತ ಯವನರ ಮನೆಯಂಗಳದಲ್ಲಿಯ ಗಿಳಿಗಳಾಡುವ ಪಾರಸಿಕ ಮಾತುಗಳಿಂದ ನನಗೆ ಹೆಚ್ಚು ವ್ಯಥೆಯಾಗುತ್ತದೆ. "

" ತರುಣಿಯರ ಮೈಗಂಧದಿಂದ ಸುವಾಸನೆಗೊಳ್ಳುತ್ತಿದ್ದ ತಾಮ್ರಪರ್ಣೀ-ನದಿಯ ಪ್ರವಾಹವು ರಕ್ತಮಾಂಸಗಳಿಂದ ತುಂಬಿ ಹರಿಯುತ್ತದೆ. "

ಶ್ರುತಿರಸ್ತಮಿತಾ ನಯಃ ಪ್ರಲೀನೋ ।
ವಿರತಾ ಧರ್ಮಕಥಾ ಚ್ಯುತಮ್ ಚರಿತ್ರಮ್ ॥
ಸುಕೃತಮ್ ಗತಮಾಭಿಜಾತ್ಯಮಸ್ತಮ್
ಕಿಮಿವಾನ್ಯತ್ ಕಲಿರೇಕ ಏವ ಧನ್ಯಃ ॥

" ವಿದ್ಯೆ, ನೀತಿ, ಧರ್ಮ, ಶೀಲ, ಸುಕೃತ ಮತ್ತು ಕುಲೀನತೆ ಎಲ್ಲವೂ ಹಾಳಾಗಿವೆ. ಕಲಿಕಾಲದ ತಾಂಡವನೃತ್ಯ ನಡೆದಿದೆ." ಎಂದು ಹೇಳಿ ಮಧುರೆಯ ಅಧಿದೇವತೆಯು ಒಂದು ಹೊಳೆಯುವ ಖಡ್ಗವನ್ನು ಮುಂದೆ ಚಾಚಿ—

ನರನಾಥ ಪುರಾ ಕೃಪಾಣಮೇನಮ್ ।
ವಿರಚಯ್ಯಾಖಿಲ ದೇವತಾಯುಧಾಂಶೈಃ ॥
ಉಪದೀಕೃತವಾನ್ ಪಿನಾಕಪಾಣೇಃ ।
ದನುಜಾನಾಮ್ ವಿಜಯಾಯ ವಿಶ್ವಕರ್ಮಾ ॥

"ಈ ಖಡ್ಗವನ್ನು ವಿಶ್ವಕರ್ಮನು ಎಲ್ಲ ದೇವತೆಗಳ ಆಯುಧ ಶಕ್ತಿಯ ಅಂಶಗಳಿಂದ ಪರಶಿವನು ದಾನವರನ್ನು ಗೆಲ್ಲುವದಕ್ಕಾಗಿ ರಚಿಸಿರುವನು." ಶಿವನು ಇದನ್ನು ಪಾಂಡ್ಯರಾಜನಿಗೆ ಕೊಟ್ಟನು. ಇದೀಗ ಪಾಂಡ್ಯರಾಜರು ಗತವೀರ್ಯರಾದ ಮೇಲೆ ಅಗಸ್ತ್ಯನು ನಿನಗೆ ಕಳಿಸಿಕೊಟ್ಟಿರುವನು. ಇದರಿಂದ ಯವನರನ್ನು ತುಂಡರಿಸಿ ಮಧುರೆಯನ್ನು ತಿರುಗಿ ವಶಪಡಿಸಿಕೊಂಡು ದಕ್ಷಿಣಭಾರತದಿಂದ ಯವನರನ್ನಟ್ಟಿ ರಾಮಸೇತುವಿನ ಮೇಲೆ ವಿಜಯಸ್ತಂಭವನ್ನು ನಿಲ್ಲಿಸು ಎಂದು ಆದೇಶಿಸುವಳು.

ಹಾಳುಬಿದ್ದ ಮಧುರೆಯ ವರ್ಣನೆಯ ಈ ಕಲ್ಪನೆಯು ಕಾಲಿದಾಸನ ರಘುವಂಶದಲ್ಲಿಯ ಹಾಳು ಬಿದ್ದ ಅಯೋಧ್ಯೆಯ ವರ್ಣನೆಯಿಂದ ಪ್ರೇರಿತವಾದಂತೆ ಕಾಣುತ್ತದೆ. ಈ ಎರಡೂ ನಗರಗಳೂ ಹಾಳು ಬೀಳಲು ಕಾರಣವಾದ ಸಂದರ್ಭಗಳು ಮಾತ್ರ ತೀರ ಭಿನ್ನವಾದವುಗಳು. ಅಲ್ಲಿ ಕುಶನು ತನ್ನ ರಾಜಧಾನಿಯನ್ನು ಬದಲಿಸಿದ್ದರಿಂದ ಅಯೋಧ್ಯೆಯು ಹಾಳು ಬಿದ್ದಿತು. ಇಲ್ಲಿ ಶತ್ರುಗಳ ದಾಳಿಯಿಂದ ನಗರವು ಹಾಳಾಯಿತು. ಆಯೋಧ್ಯಾ ನಗರದ ಅಧಿದೇವತೆಯು ಮಧ್ಯರಾತ್ರಿಯಲ್ಲಿ ಕುಶನ ಶಯ್ಯಾಗೃಹಕ್ಕೆ ಬಂದು ಚಿತ್ರಿಸಿದ ಆಯೋಧ್ಯಾ ನಗರದ ದುರ್ದೆಶೆಯ ಚಿತ್ರದಲ್ಲಿಯ ಅನೇಕ ಅಂಶಗಳನ್ನು ನಮ್ಮ ಕವಯಿತ್ರಿಯು ಮಧುರೆಯ ದುರವಸ್ಥೆಯನ್ನು ಚಿತ್ರಿಸುವಲ್ಲಿ ಸಂದರ್ಭಕ್ಕೆ ತಕ್ಕಂತೆ ಮಾರ್ಪಡಿಸಿಕೊಂಡು ಬಳಿಸಿಕೊಂಡಿದ್ದಾಳೆ.

" ರಾತ್ರಿಯಲ್ಲಿ ಅಭಿಸಾರಿಕೆಯರು ಸಂಚರಿಸುತ್ತಿರುವ ಅಯೋಧ್ಯೆಯ ಬೀದಿಗಳಲ್ಲಿ ಈಗ ನರಿಗಳು ಸಂಚರಿಸುತ್ತವೆ. "

" ಪ್ರಮದೆಯರು ಸ್ನಾನ ಮಾಡುತ್ತಿದ್ದ ಕೊಳಗಳಲ್ಲಿ ಈಗ ಕೋಣಗಳು ನುಗ್ಗುತ್ತಲಿವೆ. "

" ರಮಣಿಯರು ಪಾದಗಳಿಗೆ ಹಚ್ಚಿಕೊಂಡ ಬಣ್ಣದ ಹೆಜ್ಜೆಗಳು ಮೂಡುತ್ತಿದ್ದ ಅರಮನೆಗಳ ಸೋಪಾನಗಳ ಮೇಲೆ ಮೃಗಗಳನ್ನು ಕೊಂದು ತಿರುಗುವ ಹುಲಿಗಳ ಹೆಜ್ಜೆಗಳು ಮೂಡುತ್ತಲಿವೆ. "

" ಕಂಬಗಳ ಮೇಲೆ ಕೆತ್ತಿದ ಹೆಣ್ಣುಗೊಂಬೆಗಳಿಗೆ ಹಾವುಗಳು ಬಿಟ್ಟುಹೋದ ಪರಿಗಳು ಸ್ತನಾಂಶುಕಗಳಾಗಿವೆ. "

" ವಿಲಾಸಿನಿಯರು ತಮ್ಮ ಕೋಮಲ ಕೈಗಳಿಂದ ಮೃದುವಾಗಿ ಹರಿಯುತ್ತಿದ್ದ ಹೂವು ಹಣ್ಣುಗಳಿರುವ ತೋಟಗಳಲ್ಲಿ ಇಂದು ಮಂಗಗಳ ಹಾವಳಿ ಹೆಚ್ಚಾಗಿದೆ. "

ಇತ್ಯಾದಿಯಾಗಿ ಮಹಾಕವಿ ಕಾಲಿದಾಸನು ಅಯೋಧ್ಯೆಯ ದುರವಸ್ಥೆಯನ್ನು ಚಿತ್ರಿಸಿದ್ದರೆ, ಕವಯಿತ್ರಿ ಗಂಗಾದೇವಿಯು ಅದೇ ಧಾಟಿಯಲ್ಲಿ ಇನ್ನೂ ಕೆಲವು ಕಲ್ಪನೆಗಳನ್ನು ಜೋಡಿಸಿ ಮಧುರೆಯ ದುರ್ದಶೆಯ ಚಿತ್ರವನ್ನು ಕರುಣಾಜನಕವಾಗಿ ನಿರೂಪಿಸಿದ್ದಾಳೆ.

ಮಧುರೆಯ ಅಧಿದೇವತೆಯ ಪ್ರೇರಣೆಯಂತೆ ಕಂಪರಾಯನು ಯವನರ ಮೇಲೆ ದಂಡೆತ್ತಿಹೋಗಿ ಭೀಕರ ಯುದ್ಧವನ್ನು ಹೂಡುವನು. ಗಂಗಾದೇವಿಯು ಶೃಂಗಾರರಸ ಮತ್ತು ಕರುಣರಸ ಪ್ರಧಾನವಾದ ಸನ್ನಿವೇಗಶಳನ್ನು ವರ್ಣಿಸುವದರಲ್ಲಿರುವಷ್ಟೇ ಕೌಶಲ್ಯವನ್ನು ವೀರರಸಪ್ರಧಾನವಾದ ಯುದ್ಧದ ಸನ್ನಿವೇಶವನ್ನು ವರ್ಣಿಸುವದರಲ್ಲಿಯೂ ತೋರಿಸಿದ್ದಾಳೆ. ಕಂಪರಾಯನಿಗೂ ಚಂಪರಾಯನಿಗೂ ಆದ ಯುದ್ಧದ ವರ್ಣನೆಗಳು ಅವಳ ವೀರವೃತ್ತಿಯನ್ನು ಚನ್ನಾಗಿ ವ್ಯಕ್ತಪಡಿಸುತ್ತವೆ. ಅವಳು ಯುದ್ಧವನ್ನು

ಪ್ರತ್ಯಕ್ಷವಾಗಿ ಕಂಡು ವರ್ಣಿಸಿದಂತಿದೆ.

"ಕುದುರೆಯ ಸವಾರನು ಆನೆಯ ತಲೆಗೆ ಖಡ್ಗವನ್ನು ಚುಚ್ಚಿ ದೂರ ಸರಿಸುತ್ತಿರುವಷ್ಟರಲ್ಲಿಯೇ ಆನೆಯು ಅವನ ಕುದುರೆಯನ್ನು ಹಿಡಿದೆಳೆದು ನೆಲಕ್ಕೆ ಅಪ್ಪಳಿಸುತ್ತಿತ್ತು."

"ಆನೆಯಿಂದ ಮೇಲಕ್ಕೆಸೆಯಲ್ಪಟ್ಟ ಓರ್ವ ವೀರನು ಅದರ ಬೆನ್ನ ಮೇಲೆರಗಿ ಮಾವುತನನ್ನು ನೆಲಕ್ಕುರುಳಿಸಿ ತಾನೇ ಗಜಾರೋಹಿ ಯಾದನು."

"ಬಹಳ ಹೊತ್ತಿನಿಂದ ಖಡ್ಗಯುದ್ಧವನ್ನು ಮಾಡುತ್ತ ಕಲಹ ದಲ್ಲಿ ತೊಡಗಿದ ಇಬ್ಬರು ವೀರರು ಒಂದೇ ಕ್ಷಣದಲ್ಲಿ ಪರಸ್ಪರರ ಚೆಂಡುಹಾರಿಸಿ ಸ್ನೇಹಿತರಂತೆ ಜೊತೆಯಾಗಿ ಸ್ವರ್ಗವನ್ನು ಸೇರಿದರು."

ಎಂದು ಮುಂತಾಗಿ ಯುದ್ಧದ ಚಿತ್ರವು ಕಣ್ಣುಮುಂದೆ ಕಟ್ಟು ವಂತೆ ನಮ್ಮ ಕವಯಿತ್ರಿಯು ಸೊಗಸಾಗಿ ವರ್ಣಿಸುವಳು. ಎರಡೂ ಸೈನ್ಯಗಳಲ್ಲಿಯ ತುಮುಲ ಯುದ್ಧವು ಮುಂದುವರಿದು ಯುದ್ಧದ ಕಾವೇರಿದಾಗ ಕಂಪ ಮತ್ತು ಯವನರಾಜನ ದ್ವಂದ್ವಯುದ್ಧವು ಪ್ರಾರಂಭವಾಗುವದು. ಕಂಪನ ಬಾಣಗಳು ಕಾಳರಾತ್ರಿಯ ಕಟಾಕ್ಷಗಳಂತೆ ಯವನರಾಜನ ಮೇಲೆ ಬೀಳತೊಡಗುವವು. ವೀರರೀರ್ವರೂ ಕೆಲಹೊತ್ತು ಕಾದಿದ ಮೇಲೆ ಕಂಪರಾಯನು ಅಗಸ್ತ್ಯನು ಕಳಿಸಿಕೊಟ್ಟ ಖಡ್ಗವನ್ನು ಹಿರಿಯುವನು. ಕ್ಷಣಾರ್ಧ ದಲ್ಲಿ ಯವನರಾಜನ ರುಂಡವು ನೆಲಕ್ಕೆ ಬೀಳುವದು.

ಪ್ರಶಾಂತದಾವೇವ ವಸಾಂತಲಕ್ಷ್ಮೀಃ ।
ಗತೋಪರಾಗಾ ಗಗನಸ್ಥಲೀವ ॥
ಕಲಿಂದಜಾಮರ್ದಿತಕಾಲಿಯೇವ ।
ದಿಗ್ ದಕ್ಷಿಣಾಸೀತ್ ಕ್ಷತಪಾರಸೀಕಾ ॥

" ದಾವಾಗ್ನಿಯು ಶಾಂತವಾದ ಅಡವಿಯಂತೆ, ಗ್ರಹಣವು ಬಿಟ್ಟ ಮೇಲಿನ ಆಕಾಶದಂತೆ, ಕಾಲಿಯಮರ್ದನವಾದ ನಂತರದ ಯಮುನೆಯಂತೆ, ದಕ್ಷಿಣ ದೇಶವು ಪಾರಸಿಕರ ಹಾವಳಿಯಿಂದ ಮುಕ್ತವಾಯಿತು." ಎಂದು ನಮ್ಮ ಕವಯಿತ್ರಿಯ ಕಾವ್ಯವು ಮುಕ್ತಾಯವಾಗುವದು.

ಗಂಗಾದೇವಿಯ ಮಧುರಾವಿಜಯವು ಐತಿಹಾಸಿಕ ಕಾವ್ಯವೆಂಬ ದೃಷ್ಟಿಯಿಂದ ಈಗಾಗಲೇ ಮಹತ್ವವನ್ನು ಪಡೆದಿದೆ. ಆದರೆ ಈವರೆಗೆ ವಿವರಿಸಿದ ಸಂದರ್ಭಗಳು ಅದರ ಕಾವ್ಯಗುಣವನ್ನೂ ಎತ್ತಿ ತೋರಿಸುತ್ತವೆ. ಗಂಗಾದೇವಿಯ ಕಾಲಕ್ಕೆ ಸಂಸ್ಕೃತದ ಪಂಚ ಮಹಾಕಾವ್ಯಗಳು ಬರೆಯಲ್ಪಟ್ಟು ಬಳಕೆಯಲ್ಲಿ ಬಂದುಬಿಟ್ಟಿದ್ದವು. ಸರಸತೆ ಮತ್ತು ಪಾಂಡಿತ್ಯ ಎರಡೂ ದೃಷ್ಟಿಯಿಂದಲೂ ಕಾವ್ಯ ನಿರ್ಮಾಣದ ಕೊನೆಯ ಹಂತವನ್ನು ಸಂಸ್ಕೃತ ಕಾವ್ಯಗಳು ಮುಟ್ಟಿ ಬಿಟ್ಟಿದ್ದವು. ಈ ಹಿನ್ನೆಲೆಯಲ್ಲಿ ಹೊಸ ಕಾವ್ಯನಿರ್ಮಾಣದ ಸಾಹಸಕ್ಕೆ ಕೈಹಾಕಿರುವದು ಮತ್ತು ಅದರಲ್ಲಿ ಬಹುಮಟ್ಟಿಗೆ ಯಶಸ್ಸನ್ನು ಸಂಪಾದಿಸಿರುವದು ಸಾಮಾನ್ಯವಾದ ಮಾತಲ್ಲ. ಗಂಗಾದೇವಿಯ ಕಾವ್ಯವು ಪ್ರಸಿದ್ಧ ಮಹಾಕಾವ್ಯಗಳಲ್ಲಿ ಒಂದೆಂದು ಪರಿಗಣಿಸಲ್ಪಡದಿದ್ದರೂ ಈ ಕಾವ್ಯಗಳಲ್ಲಿಯ ಅನೇಕ ಸಂದರ್ಭಗಳು ಆ ಮಹಾಕಾವ್ಯಗಳಲ್ಲಿಯ ಉತ್ತಮ ಸಂದರ್ಭಗಳಿಗೆ ಸರಿಗಟ್ಟಿ ನಿಲ್ಲುವಂತಹವಾಗಿವೆ. ಭಾಷೆಯು ಸುಲಭವೂ ಸ್ಪಷ್ಟವೂ ಆಗಿದೆ. ಕಲ್ಪನೆಗಳು ಹೊಸವೂ ಸಂದರ್ಭೋಚಿತವಾದವುಗಳೂ ಆಗಿವೆ. ವರ್ಣನೆಗಳು ಉದ್ದವಾಗಿರುವದಿಲ್ಲ ಮತ್ತು ಅತಿರಂಜಿತವಾಗಿರುವದಿಲ್ಲ. ಶೃಂಗಾರ ಮತ್ತು ವೀರರಸಗಳು ಚನ್ನಾಗಿ ಬೆಳೆದುಬಂದಿವೆ. ಶೈಲಿಯು ಸರಸವೂ ಬಂಧುರವೂ ಆಗಿದೆ. ಕವಯಿತ್ರಿಯ ರಸಿಕತೆಯಲ್ಲದೆ, ಲೋಕಾನುಭವ, ವಿವೇಕ, ದೇಶಭಕ್ತಿ ಮತ್ತು ವೀರವೃತ್ತಿ

ಗಳು ಕಾವ್ಯದಲ್ಲಿ ಮೂಡಿಬಂದಿವೆ. ಸಂಸ್ಕೃತ ಕಾವ್ಯಗಳ ಸಂಪ್ರದಾಯವೂ ಇದೆ. ಹೊಸತನವೂ ಇದೆ.

**ಕರೋತಿ ಕೀರ್ತಿಮಾರ್ಥಾಯ ಕಲ್ಪತೇ ಹಂತಿ ದುಷ್ಕೃತಮ್ ।**
**ಉನ್ಮೀಲಯತಿ ಚಾಲ್ಹಾದಮ್ ಕಿಮ್ ನ ಸೂತೇ ಕವೇಃ ಕೃತಿಃ ॥**

ಎಂದು ನಮ್ಮ ಕವಯಿತ್ರಿಯೇ ಹೇಳಿದಂತೆ ಮಧುರಾವಿಜಯವು ಕವಯಿತ್ರಿಗೆ ಕೀರ್ತಿಯನ್ನೂ ನಮಗೆ ಆಲ್ಹಾದವನ್ನೂ ಉಂಟು ಮಾಡುತ್ತದೆ.

---

# ತಿರುಮಲಾಂಬೆ

ಸಂಸ್ಕೃತ ಕವಯಿತ್ರಿಯರಲ್ಲಿ ಪೂರ್ಣಕೃತಿಯು ಉಪಲಬ್ಧವಿರುವ ಇನ್ನೊರ್ವ ಕವಯಿತ್ರಿಯು ತಿರುಮಲಾಂಬೆ. ಇವಳೂ ವಿಜಯ ನಗರದ ರಾಜಮನೆತನಕ್ಕೆ ಸೇರಿದವಳು. ೧೬ನೆಯ ಶತಕದ ಪೂರ್ವಾರ್ಧದಲ್ಲಿ ( ೧೫೩೦–೪೨ ) ಆಳಿದ ಅಚ್ಯುತದೇವರಾಯನ ಪ್ರಿಯೆ. ಇವಳು ವರದಾಂಬಿಕಾಪರಿಣಯವೆಂಬ ಚಂಪೂಕಾವ್ಯ ವನ್ನು ಬರೆದಿರುವಳು.

ಕಾವ್ಯದ ಕಥೆಯು ತುಳುವಮನೆತನದ ಅರಸೊತ್ತಿಗೆಯ ಸಂಸ್ಥಾ ಪಕನಾದ ನರಸನಾಯಕನ ಮನೆತನದ ಪೂರ್ವೇತಿಹಾಸದಿಂದ ಪ್ರಾರಂಭವಾಗುವದು. ಚಂದ್ರ, ಬುಧ, ಪುರೂರವಸ, ಆಯು, ನಹುಷ, ಯಯಾತಿ, ತುರ್ವಸು ಹೀಗೆ ಪುರಾಣಪ್ರಸಿದ್ಧರಾದ ಚಂದ್ರವಂಶಜರ ಕುಲದಲ್ಲಿ ತಿಮ್ಮನಾಯಕನೆಂಬವನು ಜನಿಸಿದನು. ಅವನಿಗೆ ದೇವಕಿಯ ಹೊಟ್ಟೆಯಲ್ಲಿ ಈಶ್ವರನಾಯಕನೆಂಬ ಮಗ ನಾದನು. ಈಶ್ವರನಾಯಕ ಮತ್ತು ಬುಕ್ಕಮಾಂಬೆಯರ ಮಗನೇ ನರಸರಾಜನು.

ಕಾವ್ಯದ ಮೊದಲಿನ ಭಾಗವು ನರಸರಾಜನ ರೂಪ ಗುಣ ಪರಾಕ್ರಮಗಳ ವರ್ಣನೆ, ಅವನ ದಿಗ್ವಿಜಯ, ತೊಂಡಮಂಡಲ ಮತ್ತು ಚೋಳದೇಶಗಳ ವರ್ಣನೆ, ಕಾವೇರಿಯ ವರ್ಣನೆ, ನರಸ ರಾಜನಿಗೂ ಚೋಳರಾಜನಿಗೂ ಆದ ಯುದ್ಧದ ವರ್ಣನೆ, ಸಮುದ್ರದ ವರ್ಣನೆ, ನರಸರಾಜನು ರಾಮೇಶ್ವರನನ್ನು ಪೂಜಿಸಿ ಅನೇಕ ದುರ್ಗಗಳನ್ನು ವಶಪಡಿಸಿಕೊಳ್ಳುತ್ತ ಮುಸಲ್ಮಾನರನ್ನು ಸೋಲಿಸಿ ವಿದ್ಯಾನಗರಿಗೆ ತಿರುಗಿ ಬಂದ ಘಟನೆಗಳಿಂದ ಕೂಡಿದೆ.

ವಿಜಯನಗರಕ್ಕೆ ಹಿಂದಿರುಗಿದ ಮೇಲೆ ಅವನು ಸೂರ್ಯವಂಶದ ಓಮಾಂಬೆಯನ್ನು ಮದುವೆಯಾಗಿ ಅಚ್ಯುತರಾಯನೆಂಬ ಮಗನನ್ನು ಪಡೆಯುವನು. ಕಾವ್ಯದ ಮುಂದಿನ ಭಾಗದಲ್ಲಿ ಅಚ್ಯುತದೇವ ರಾಯನ ತಾರುಣ್ಯದ ವರ್ಣನೆ, ಅವನ ವಿದ್ಯಾಭ್ಯಾಸ, ಅವನು ಒಂದು ದಿನ ಉದ್ಯಾನಕ್ಕೆ ಹೋದುದು, ಅಲ್ಲಿ ಭವಾನೀ ಮಂದಿರ ದಲ್ಲಿ ವರದಾಂಬಿಕೆಯನ್ನು ಕಂಡುದು, ಪರಸ್ಪರರಲ್ಲಿ ಪ್ರೇಮಾಂಕುರ, ಪ್ರೇಮಿಗಳ ದಶೆ, ವಿದೂಷಕನ ಮಧ್ಯಸ್ಥಿಕೆ, ವಿವಾಹ, ಮಧುಮಾಸದ ವರ್ಣನೆ, ವನವಿಹಾರ, ವರದಾಂಬಿಕೆಯ ಗರ್ಭಧಾರಣೆ, ಚಿನ ವೆಂಕಟಾದ್ರಿಯ ಜನನ, ಇತ್ಯಾದಿ ಘಟನೆಗಳು ಚಿತ್ರಿತವಾಗಿವೆ. ಅಚ್ಯುತರಾಯನು ಚಿನವೆಂಕಟಾದ್ರಿಗೆ ಯುವರಾಜ ಪಟ್ಟವನ್ನು ಕೊಟ್ಟನೆಂದು ಹೇಳಿ

**ಅತ್ಯಾದರಾದಚ್ಯುತದೇವರಾಯಮ್ ವರೇಣ್ಯಶೀಲಾಮ್**
**ವರದಾಂಬಿಕಾಂ ಚ ।**
**ಶ್ರೇಯೋನಿಧಾನಮ್ ಚಿನವೆಂಕಟಾದ್ರಿಮ್ ಶ್ರೀವೆಂಕಟೇಶ-**
**ಶ್ಚಿರಕಾಲಮವ್ಯಾತ್ ॥**

ಎಂದು ತಿರುಮಲಾಂಬೆಯು ತನ್ನ ಕಾವ್ಯವನ್ನು ಮುಗಿಸುವಳು.

ಕವಯಿತ್ರಿ ತಿರುಮಲಾಂಬೆಯು ಕಾವ್ಯದ ಕೊನೆಯಲ್ಲಿ ತನ್ನ ಬಗ್ಗೆ ಕೆಲವು ವಿವರಗಳನ್ನು ಕೊಡುವಳು. ತಾನು ಒಂದು ಬಾರಿ ಮಾತ್ರ ಕೇಳಿ ಕಾವ್ಯ, ನಾಟಕ, ಪುರಾಣೇತಿಹಾಸಾದಿಗಳಲ್ಲಿ ಪಾಂಡಿತ್ಯವನ್ನು ಸಂಪಾದಿಸಿದಂಥ ನೈಸರ್ಗಿಕ ಪ್ರತಿಭೆಯುಳ್ಳವಳು, ಅನೇಕ ಭಾಷೆಗಳನ್ನು ಬಲ್ಲವಳಾಗಿದ್ದು ಸರಸಪ್ರಬಂಧಗಳನ್ನು ಬರೆಯಬಲ್ಲವಳು, ಮಧುರ ಕಂಠವುಳ್ಳವಳು, ಕವಿಗಳಿಗೆ ಆಶ್ರಯ ದಾತಳು, ದತ್ತಿಯ ಶಾಸಗಳನ್ನು ಬರೆದು ಬರೆದು ಪವಿತ್ರ ಹಸ್ತ ವುಳ್ಳವಳು, ನಿರ್ಮಲ ಮನಸ್ಸಿನವಳು ಎಂದು ತನ್ನ ಪ್ರತಿಭೆ,

ವಿದ್ಯೆ, ಕಲಾಭಿಜ್ಞತೆ ಮತ್ತು ವಿಶಾಲಾಂತಃಕರಣಗಳ ಬಗೆಗೆ ಆತ್ಮ ವಿಶ್ವಾಸದಿಂದ ಹೇಳಿಕೊಳ್ಳುವಳು. ರಾಜಾಧಿರಾಜನಾದ ಅಚ್ಯುತ ರಾಯನ ಪ್ರೇಮಸರ್ವಸ್ವಕ್ಕೆ ಪಾತ್ರಳು ಎಂದು ಹೇಳಿಕೊಳ್ಳುವಳು. ನಮ್ಮ ಕವಯಿತ್ರಿ ತಿರುಮಲಾಂಬೆಯು ಹಂಪಿಯ ವಿಠ್ಠಲೇಶ್ವರನ ಗುಡಿಯಲ್ಲಿಯ ಸುವರ್ಣಮೇರುದಾನದ ಉಲ್ಲೇಖವಿರುವ ಶಾಸನ ದಲ್ಲಿಯ ಸಂಸ್ಕೃತ ಶ್ಲೋಕವನ್ನು ಬರೆದ ಮತ್ತು ಇನ್ನಿತರ ಆ ಕಾಲದ ಶಾಸನಗಳಲ್ಲಿ ಬರುವ 'ಓದುವ ತಿರುಮಲಾಂಬೆ' ಎಂದು ವಿದ್ವಾಂಸರು ನಿರ್ಣಯಿಸಿದ್ದಾರೆ. ಈ ನಿರ್ಣಯವನ್ನು ಒಪ್ಪಿ ಕೊಳ್ಳಲು ಯಾವ ಅಭ್ಯಂತರವೂ ಇಲ್ಲ.

ಕಾವ್ಯದ ಕಥೆಯು ಕ್ರಿ. ಶ. ೧೪೯೭ರಿಂದ ೧೫೦೩ರ ವರೆಗೆ ಆಳಿದ ನರಸನಾಯಕ ಮತ್ತು ೧೫೩೦ರಿಂದ ೧೫೪೨ರ ವರೆಗೆ ಆಳಿದ ಅವನ ಮಗ ಅಚ್ಯುತದೇವರಾಯನ ಕಾಲದ ಘಟನೆಗಳಿಂದ ಕೂಡಿದೆ. ಕೊನೆಗೆ ಚಿನವೆಂಕಟಾದ್ರಿಯು ಯುವರಾಜನಾದ ಉಲ್ಲೇಖವಿದೆ. ನರಸನಾಯಕನ ತಂದೆ ಈಶ್ವರನಾಯಕ ಮತ್ತು ನರಸನಾಯಕರು ಸಾಳುವ ಮನೆತನದ ನರಸಿಂಹರಾಯ ಮತ್ತು ಇಮ್ಮಡಿ ನರಸಿಂಹನಿಗೆ ಸೇನಾಪತಿಯಾಗಿದ್ದರು. ಇಮ್ಮಡಿ ನರಸಿಂಹನು ಚಿಕ್ಕವನಾಗಿದ್ದರಿಂದ ಸೇನಾಪತಿಯೂ ಮಹಾ ಪ್ರಧಾನಿಯೂ ಆದ ನರಸನಾಯಕನು ರಾಜ್ಯಸೂತ್ರಗಳನ್ನೆಲ್ಲ ತನ್ನ ಕೈಗೆ ತೆಗೆದುಕೊಂಡು ಸಾಳುವ ಮನೆತನವನ್ನು ಹಿಂದಕ್ಕಟ್ಟಿ ತುಳು ಮನೆತನದ ಅರಸೊತ್ತಿಗೆಯ ಆರಂಭಕ್ಕೆ ಪೀಠಿಕೆ ಹಾಕಿ ದನು. ತಿರುಮಲಾಂಬೆಯ ಚಂಪೂ ಕಾವ್ಯದ ಹೆಸರು ವರದಾಂಬಿಕಾ ಪರಿಣಯವೆಂದಿದ್ದರೂ ಅಚ್ಯುತರಾಯ ಮತ್ತು ವರದಾಂಬಿಕೆಯರ ವಿವಾಹವೇ ಮುಖ್ಯ ವಿಷಯವಾಗಿದ್ದರೂ ಕಾವ್ಯದ ಅರ್ಧದಷ್ಟು ಭಾಗವು ಅಚ್ಯುತರಾಯನ ತಂದೆ ನರಸಿಂಹನ ದಿಗ್ವಿಜಯದ

ವರ್ಣನೆಯಿಂದಲೇ ತುಂಬಿದೆ. ನರಸನಾಯಕನಿಗೆ ಮೂರು ಜನ ಹೆಂಡಂದಿರಿದ್ದರೂ ಮೂರನೆಯವಳಾದ ಓಮಾಂಬೆ–ಅಚ್ಯುತ ರಾಯನ ತಾಯಿ – ಯನ್ನು ಬಿಟ್ಟು ಇನ್ನುಳಿದವರ ಹೆಸರನ್ನು ಕೂಡ ಕಾವ್ಯದಲ್ಲಿ ಉಲ್ಲೇಖಿಸಿಲ್ಲ. ನರಸಿಂಹನ ತರುವಾಯ ಆಳಿದ ಅಚ್ಯುತದೇವರಾಯನ ಇಬ್ಬರು ಮಲ ಅಣ್ಣಂದಿರಾದ ವೀರನರಸಿಂಹ ಮತ್ತು ಕೃಷ್ಣದೇವರಾಯರ ಹೆಸರನ್ನೂ ಕಾವ್ಯದಲ್ಲಿ ಎತ್ತಿಲ್ಲ. ವಿಜಯನಗರದ ರಾಜರಲ್ಲಿಯೇ ಅತ್ಯಂತ ಕೀರ್ತಿಶಾಲಿಯಾದ ಕೃಷ್ಣದೇವರಾಯನು ನರಸಿಂಹನ ತರುವಾಯ ಮತ್ತು ಅಚ್ಯುತ ರಾಯನಿಗಿಂತ ಮೊದಲು ೨೦ ವರ್ಷಗಳ ಕಾಲ ವೈಭವದಿಂದ ರಾಜ್ಯವಾಳಿದ್ದರ ಬಗೆಗೆ ಕವಯಿತ್ರಿಯು ಸಂಪೂರ್ಣವಾಗಿ ಮೌನ ವನ್ನು ತಾಳಿರುವದು ಅದಕ್ಕೆ ಪ್ರಬಲವಾದ ರಾಜಕೀಯ ಕಾರಣ ಗಳಿರುವದನ್ನು ಸೂಚಿಸುತ್ತದೆ. ಕೃಷ್ಣದೇವರಾಯನ ತರುವಾಯ ಪಟ್ಟಕ್ಕಾಗಿ ತೀವ್ರವಾದ ಕಲಹಗಳುಂಟಾಗಿ ಕೊನೆಗೆ ಅಚ್ಯುತ ರಾಯನಿಗೆ ಪಟ್ಟವು ದೊರೆಯಿತು. ಕೃಷ್ಣದೇವರಾಯನ ಮಗ ತಿರುಮಲರಾಯನು ವಿಷಕ್ಕೆ ಆಹುತಿಯಾಗಿದ್ದನು. ಬಹುಶಃ ಅಚ್ಯುತರಾಯನನ್ನು ಎತ್ತಿ ಕಟ್ಟಿದವರು ಕೃಷ್ಣದೇವರಾಯನ ಪರಾ ಕ್ರಮ ಮತ್ತು ವೈಭವದ ಕಥೆಗಳ ಬಗ್ಗೆ ತುಂಬ ಅಸಹನೆಯುಳ್ಳವ ರಾಗಿರಬೇಕು. ಆದುದರಿಂದ ನಮ್ಮ ಕವಯಿತ್ರಿಯು, ತಂದೆ ನರಸಿಂಹನ ಪರಾಕ್ರಮದ ವರ್ಣನೆಯನ್ನು ಮುಗಿಸಿ ನೇರವಾಗಿ ಅವನ ಮೂರನೆಯ ಹೆಂಡತಿಯ ಮಗ ಅಚ್ಯುತರಾಯನ ವೃತ್ತಾಂತಕ್ಕೆ ಬಂದುಬಿಡುವಳು. ಅಚ್ಯುತರಾಯನ ಪ್ರೇಮಸರ್ವಸ್ವಕ್ಕೆ ಪಾತ್ರಳಾದ ಅವಳಿಗೆ ಅವನಿಗೆ ಆಗದವರ ಗೊಡವೆ ಬೇಡಾದುದು ಆಶ್ಚರ್ಯವಲ್ಲ. ನರಸರಾಜ ಮತ್ತು ಅಚ್ಯುತದೇವರಾಯರ ನಡು ವಿನ ಐತಿಹಾಸಿಕ ಘಟನೆಗಳನ್ನು ಕತ್ತರಿಸಿದ ಕೊರತೆಯು ಐತಿ

ಹಾಸಿಕ ಕೊರತೆ. ಆದರೆ ಕಾವ್ಯದ ದೃಷ್ಟಿಯಿಂದಲೂ ಈ ಕಾವ್ಯದ ಮೊದಲನೆಯ ಮತ್ತು ಮುಂದಿನ ಭಾಗಗಳಲ್ಲಿ ಒಂದು ಬದಲು ಅನುಭವಕ್ಕೆ ಬರುವದು. ಮೊದಲಿನ ಭಾಗವು ಕೇವಲ ಶಬ್ದಾಡಂಬರದಿಂದ ಕೂಡಿದ್ದೂ ವರ್ಣನಾಪ್ರಧಾನವೂ ಆಗಿರುವದು. ಮುಂದಿನ ಭಾಗದಲ್ಲಿ ಕಥೆ ಹೆಚ್ಚು ಹದವಾಗಿ ಬೆಳೆದಿದೆ. ಶಬ್ದಗಳ ಅಬ್ಬರ ತುಸು ಕಡಿಮೆಯಾಗಿದೆ ಕಲ್ಪನೆಗಳಲ್ಲಿ ಒತ್ತಾಯ ಕಡಿಮೆಯಾಗುತ್ತ ನಡೆದು ಸಹಜತೆ ಮೂಡುತ್ತ ಬಂದಿದೆ. ಗದ್ಯಪದ್ಯಗಳ ಸಾಮರಸ್ಯ ಹೆಚ್ಚಿದೆ. ಕೇವಲ ಉದ್ದುದ್ದಾದ ವರ್ಣನೆಗಳು ಕಡಿಮೆಯಾಗಿ ಪಾತ್ರಗಳ ಸಂಖ್ಯೆ ಹೆಚ್ಚಿ ನಡುನಡುವೆ ಸಂವಾದಗಳೂ ಕೂಡಿಕೊಂಡಿವೆ. ಹೀಗೆ ಮೊದಲಿನ ಭಾಗವು ಕವಯಿತ್ರಿಯ ಮತಿಯು ಇನ್ನೂ ಪಕ್ವವಾಗದಿರುವದನ್ನೂ ಮತ್ತು ಸಂಸ್ಕೃತ ಭಾಷೆಯ ಮೇಲೆ ತನಗಿರುವ ಪ್ರಭುತ್ವವನ್ನು ತೋರಿಸುವ ಚಾಪಲ್ಯವೇ ಹೆಚ್ಚಾಗಿದ್ದು ಸಹಜಸುಂದರ ಕಾವ್ಯನಿರೂಪಣೆಯ ಕಡೆಗೆ ಅಷ್ಟೊಂದು ಗಮನವಿಲ್ಲದಿರುವದನ್ನೂ ತೋರಿಸುತ್ತದೆ. ಮುಂದಿನ ಭಾಗದಲ್ಲಿ ಕವಯಿತ್ರಿಯ ಬುದ್ಧಿ, ಹೃದಯಗಳು ಪಕ್ವವಾಗುತ್ತಿರುವದೂ ಶಬ್ದಾಡಂಬರದ ಮೇಲಿನ ಮೋಹವು ಕಡಿಮೆಯಾಗುತ್ತಿರುವದೂ ಕಂಡುಬರುತ್ತವೆ. ಬಹುಶಃ ನಮ್ಮ ಕವಯಿತ್ರಿಯು ಕಾವ್ಯದ ಮೊದಲಿನ ಭಾಗವನ್ನು ಬರೆದು ಕೆಲ ಕಾಲದ ನಂತರ ಮುಂದಿನ ಭಾಗವನ್ನು ಬರೆದಿರಬೇಕು. ಕಾವ್ಯವನ್ನು ಬರೆಯಲು ಆರಂಭಿಸುವಾಗ ತುಳು ಮನೆತನದ ಅರಸೊತ್ತಿಗೆಯ ಸಂಸ್ಥಾಪಕ ನರಸಿಂಹನ ಚರಿತ್ರೆಯಿಂದಾರಂಭಿಸಿ ವಿಸ್ತಾರವಾಗಿ ಬರೆಯುವ ಉದ್ದೇಶವನ್ನಿಟ್ಟುಕೊಂಡು ನರಸಿಂಹನ ದಿಗ್ವಿಜಯವೇ ಮೊದಲಾದವುಗಳನ್ನು ದೀರ್ಘವಾಗಿ ಬರೆದಿರಬೇಕು. ಮುಂದೆ ಪಟ್ಟಕ್ಕಾಗಿ ಕಲಹವೇ ಮೊದಲಾದ ರಾಜಕೀಯ ಕಾರಣ

ಗಳಿಂದಾಗಿ ಕೇವಲ ಅಚ್ಯುತರಾಯನ ವೃತ್ತಾಂತವನ್ನು ಮಾತ್ರ ಜೋಡಿಸಬೇಕಾಗಿ ಬಂದು ಮುಂದಿನ ಅರ್ಧಭಾಗದಲ್ಲಿ ಅಚ್ಯುತ ರಾಯ ಮತ್ತು ವರದಾಂಬಿಕೆಯರ ವಿವಾಹದ ವೃತ್ತಾಂತವನ್ನು ಸಪರಿಕರವಾಗಿ ಹೆಣೆದು ವರದಾಂಬಿಕಾ ಪರಿಣಯ ಚಂಪೂ ಕಾವ್ಯಕ್ಕೆ ಈಗಿದ್ದ ರೂಪವನ್ನು ಕೊಟ್ಟಿರಬಹುದೆಂದು ಕಾಣುತ್ತದೆ. ಈ ಹಿನ್ನೆಲೆಯಲ್ಲಿ ಕಾವ್ಯದ ಕಾಲವನ್ನು ನಾವು ಇಂಥದೇ ಘಟನೆಯ ನಂತರ ಅಥವಾ ಮೊದಲು ಎಂದು ನಿರ್ದಿಷ್ಟಪಡಿಸುವದಕ್ಕಿಂತ ೧೬ನೆಯ ಶತಕದ ಪೂರ್ವಾರ್ಧದಲ್ಲಿ ಬರೆದುದು ಎಂದು ಶಿಥಿಲವಾಗಿ ರಿಸುವದೇ ಸಮಂಜಸವಾಗಿ ಕಾಣುವದು.

ತಿರುಮಲಾಂಬೆಯ ಕೃತಿಯು ಕ್ಲಿಷ್ಟವೂ ಪಂಡಿತಪ್ರಿಯವೂ ಆಗಿದ್ದರೂ ಅನೇಕ ಕಾವ್ಯಗುಣಗಳಿಂದ ಕೂಡಿದೆ. ಉದ್ದಾದ ಸಮಾಸಗಳೂ ಅಸಂಖ್ಯ ವಿಶೇಷಣಗಳೂ ಬೇಸರವನ್ನುಂಟುಮಾಡುವದರಲ್ಲಿಯೇ ಪದ್ಯಗಳು ನಡುವೆ ಬಂದು ವಿರಾಮವನ್ನುಂಟುಮಾಡುತ್ತವೆ. ಅನೇಕ ಕಡೆಗೆ ಅರ್ಥಕ್ಕಿಂತ ಪ್ರಾಸವೇ ಪ್ರಧಾನವಾಗಿರುವದನ್ನು ಕಂಡು ನಿರಾಶೆಗೊಳ್ಳುತ್ತಿರುವಷ್ಟರಲ್ಲಿಯೇ ಅರ್ಥವತ್ತಾದ ಮಾತುಗಳು ಬಂದು ನಮ್ಮ ಆಸ್ಥೆಯ ಪುನರುಜ್ಜೀವನವಾಗಿ ಓದು ಮುಂದುವರಿಯುತ್ತದೆ. ಕಾವ್ಯದ ಮೊದಲು ಭಾಗದಲ್ಲಿ ಕಥೆಯ ಬೆಳವಣಿಗೆಯೇ ಇಲ್ಲದೆ ವರ್ಣನೆಯ ಅರಣ್ಯದಲ್ಲಿ ಹಾದಿಯೇ ದೊರೆಯದಂತಾದರೂ ಮುಂದಿನ ಭಾಗದಲ್ಲಿ ಕಥೆ ವರ್ಣನೆಗಳು ಹಾಸುಹೊಕ್ಕಾಗಿ ಮುಂದುವರಿಯುತ್ತ ಓದುಗರನ್ನು ಆಕರ್ಷಿಸುತ್ತವೆ. ಗದ್ಯದ ಶೈಲಿಯು ಹಿಂದಿನ ಗದ್ಯಕಾರರಾದ ಬಾಣ, ಸುಬಂಧು, ಹಾಗು ದಂಡಿಯ ಶೈಲಿಯನ್ನೇ ಅನುಸರಿಸಿದೆ. ದೀರ್ಘ ವರ್ಣನೆಗಳ ಕೊನೆಗೆ ಪರಿಸಂಖ್ಯೆ, ಶ್ಲೇಷ, ವಿರೋಧಾಭಾಸ, ಮೊದಲಾದವುಗಳನ್ನು ಸೇರಿಸುವ ಗದ್ಯಕಾರರ ಸಂಪ್ರದಾಯವನ್ನು ಸೊಗಸಾಗಿ

ಅನುಸರಿಸಿದ್ದಾಳೆ. ಕವಯಿತ್ರಿಯ ಪಾಂಡಿತ್ಯ, ಪ್ರತಿಭೆ, ಲೋಕಾನುಭವ, ಮಾನವಸ್ವಭಾವ ಪರಿಚಯ, ವರ್ಣನಾಕೌಶಲ್ಯ ಮೊದಲಾದವುಗಳನ್ನು ತಿಳಿದುಕೊಳ್ಳುವ ದೃಷ್ಟಿಯಿಂದ ವರದಾಂಬಿಕಾ ಪರಿಣಯದಲ್ಲಿಯ ಕೆಳಗಿನ ಕೆಲವು ಸಂದರ್ಭಗಳನ್ನು ನೋಡಬಹುದು.

ನರಸರಾಜನ ರಾಜ್ಯದಲ್ಲಿಯ ವಿದ್ಯಮಾನಗಳನ್ನು ವರ್ಣಿಸುತ್ತ ಕವಯಿತ್ರಿಯು ಹೀಗೆ ಹೇಳುವಳು— "ಸತ್ಯಕ್ಕೆ ವಿರುದ್ಧವಾದುದನ್ನರಿಯದ, ಷಡ್ಗುಣ, ಚತುರೋಪಾಯ ಮತ್ತು ಶಕ್ತಿತ್ರಯಯುಕ್ತನಾದ ನರಸಿಂಹನು ರಾಜ್ಯವಾಳುತ್ತಿದ್ದಾಗ ಡೊಂಕು ಸಮುದ್ರದ ತೆರೆಗಳಲ್ಲಿಯೂ, ಅರ್ಥಾಭಿಲಾಷೆಯು ಕವಿತಾರಚನೆಯಲ್ಲಿಯೂ ವಿಷಮುವರ್ತನೆಯು ಛಂದಸ್ಸಿನಲ್ಲಿಯೂ, ಪಕ್ಷಪಾತವು ಭ್ರಮರಗಳಲ್ಲಿಯೂ, ಮದವು ಆನೆಗಳಲ್ಲಿಯೂ, ಚಂಚಲತೆಯು ಹಾರಗಳಲ್ಲಿಯೂ, ದೈನ್ಯವು ಪ್ರಣಯಿಗಳಲ್ಲಿಯೂ, ಮಿತ್ರದ್ವೇಷವು ಕುಮುದಿನಿಯಲ್ಲಿಯೂ, ಮೇಲೇರಿ ಬೀಳುವದು ಗಿರಿನಿರ್ಝರಗಳಲ್ಲಿಯೂ, ವಿರೋಧ ಪ್ರಸಂಗವು ಅಲಂಕಾರ ಗ್ರಂಥಗಳಲ್ಲಿಯೂ, ಪರದೂಷಣ, ಛಲ, ಮಾಯಾವಾದ, ನಿಗ್ರಹಸ್ಥಾನಗಳು ಶಾಸ್ತ್ರಗಳಲ್ಲಿಯೂ, ಕುಟಿಲತೆ, ಚಂಚಲತೆ, ರಾಗ, ಕಾಠಿಣ್ಯ, ಶೂನ್ಯತೆಗಳು ಕಾಂತೆಯರ ಕೂದಲು, ತುಟಿ, ಕುಚಯುಗ್ಮ, ನಡುಗಳಲ್ಲಿಯೂ ಇದ್ದವು." ಇಲ್ಲಿ ಹೇಳಿದ ಮಾತುಗಳು ನರಸಿಂಹರಾಜನ ರಾಜ್ಯದಲ್ಲಿಯ ಜನತೆಯ ಸತ್ಸ್ವಭಾವ ಮತ್ತು ಸದ್ವರ್ತನೆಗಳನ್ನು ತೋರಿಸುತ್ತವೆ.

ನರಸಿಂಹರಾಜನು ವಿಜಯಯಾತ್ರೆಗೆ ಹೊರಟಾಗ ದಾರಿಯಲ್ಲಿ ಬಂದ ಕಾವೇರಿಯನ್ನು ವರ್ಣಿಸುತ್ತ ತಿರುಮಲಾಂಬೆಯು "ಕಾವೇರಿಯು ಪ್ರಶಸ್ತ ಪಾವನೆಯು, ಯೋಗಿಗಳ ಚಿತ್ತದಂತೆ ಇನ್ನಿತರ

ರಸಗಳನ್ನು ತೊರೆದು ಅನ್ಯಶ್ರುತರುಚಿಯುಳ್ಳವಳು, ರಾಮ ಕಥೆ ಯಂತೆ ಬಹು-ಲಹರಿ ( ಬಹುಲ-ಹರಿ ) ಗಳುಳ್ಳವಳು, ನರ್ತಕಿ ಯಂತೆ ತೆರೆಗಳ ನಟನೆಯಿಂದ ಶೋಭಿಸುವವಳು, ಆಧ್ಯಾತ್ಮವಿದ್ಯೆ ಯಂತೆ ಹಂಸ ( ಪರಮ ಹಂಸ ) ಗತಿಯುಳ್ಳವಳು, ಸಮುದ್ರ ರಾಜನ ಪ್ರಧಾನ ಮಹಿಷಿ ಗಂಗೆಯನ್ನು ಮೀರಿಸಿದವಳು " ಎಂದು ಸೊಗಸಾಗಿ ವರ್ಣಿಸುವಳು. ಸಮುದ್ರ, ನದಿ, ಪರ್ವತ, ಋತು ಗಳು, ಉದ್ಯಾನ ಮೊದಲಾದವುಗಳ ವರ್ಣನೆಯು ಸಂಸ್ಕೃತ ಕಾವ್ಯಗಳಲ್ಲಿ ಹೊಸದಲ್ಲ. ಆ ವರ್ಣನೆಗಳ ಪ್ರಸಂಗದಲ್ಲಿ ಮಾಡ ಬೇಕಾದ ಉತ್ಪ್ರೇಕ್ಷೆ ಉಪಮಾನಗಳು ಹೆಚ್ಚುಕಡಿಮೆ ಸಾಂಪ್ರದಾ ಯಿಕವಾಗಿಬಿಟ್ಟಿವೆ. ಆದರೂ ಅವುಗಳ ಸೂಕ್ಷ್ಮ ಪರಿಶೀಲನೆಯು ಆಯಾ ಕವಿಗಳ ಹೃದಯ, ಬುದ್ಧಿ ಮತ್ತು ಸಂಸ್ಕಾರಗಳ ನೆಲೆ ಯನ್ನು ತಿಳಿಸುತ್ತದೆ. ತಿರುಮಲಾಂಬೆಯ ವರ್ಣನೆಗಳಲ್ಲಿ ಅವಳ ಉನ್ನತಮಟ್ಟದ ಸಾಹಿತ್ಯ ಶಾಸ್ತ್ರಗಳ ವ್ಯಾಸಂಗ, ಉಚ್ಚ ಸಂಸ್ಕೃತಿ ಮತ್ತು ನಿರ್ಮಲ ಹೃದಯಗಳು ಒಡೆದು ಕಾಣುತ್ತವೆ.

ಮಾನವನು ಸುಸ್ವಭಾವಿಯೂ, ಸಾತ್ವಿಕ ವೃತ್ತಿಯುಳ್ಳವನೂ, ಸಾಹಿತ್ಯಸಂಗೀತ ಕಲಾಭಿಮಾನಿಯೂ, ವಿದ್ಯಾವಂತನೂ, ಸ್ವಪರ ಹಿತಚಿಂತಕನೂ, ಹಿತಕರ್ತನೂ ಆಗಿರಬೇಕೆಂಬಂಶದ ಬಗ್ಗೆ ನಮ್ಮ ಕವಯಿತ್ರಿಯು ವಿಶೇಷವಾದ ಆಸ್ಥೆಯುಳ್ಳವಳಾಗಿರುವಂತೆ ಕಾಣು ತ್ತದೆ. ದೇಶದ ನಾಯಕತ್ವವನ್ನು ವಹಿಸಿಕೊಂಡಿರುವ ರಾಜನಿ ಗಂತೂ ಈ ಗುಣಗಳು ಅತ್ಯವಶ್ಯವೆಂದು ಅವಳ ದೃಢವಾದ ಅಭಿಪ್ರಾಯವಾಗಿದೆ. ಅಚ್ಯುತರಾಯನು ವಿನಯ, ನಯ, ವಿವೇಕ, ಪರಾಕ್ರಮಗಳಲ್ಲಿ ಅಚ್ಯುತನಾಗಿರುವನೆಂದು ಅವನಿಗೆ ಆ ಹೆಸರನ್ನು ತಂದೆ ನರಸಿಂಹನು ಇಟ್ಟನೆಂದು ಕವಯಿತ್ರಿ ಹೇಳು ವಳು. ಅನನ್ಯಸಾಮಾನ್ಯಸೌಜನ್ಯಕಾರುಣ್ಯದಾಕ್ಷಿಣ್ಯಾದಿಗುಣಶರಣ್ಯ,

ಪುಣ್ಯತರಸರಣ್ಯಧೀನಮತಿವಿನ್ಯಾಸ, ನಿಯತಶುಭಾಚರಣ ಇತ್ಯಾದಿ ವಿಶೇಷಣಗಳಿಂದ ಕುಮಾರ ಅಚ್ಯುತರಾಯನನ್ನು ವರ್ಣಿಸು ವಳು. ತರುಣ ಅಚ್ಯುತರಾಯನ ಎದೆಯು 'ಸಕಲ ಕಲಾ ಕಲಾಪ ಚಾತುರ್ಯಗಾಂಭೀರ್ಯಕರುಣಾರಸೌದಾರ್ಯಶೌರ್ಯಾ-ರಾಧನ ವಿತರಣಾದಿ ಸ್ಪೃಹಣೀಯ ಮಹನೀಯ' ಗುಣಗಳಿಗೆ ಅವ ಕಾಶ ಕೊಡುವದಕ್ಕಾಗಿ ತುಂಬ ವಿಶಾಲವಾಗಿದ್ದಿತು. ಪರನಿಂದೆ, ಪರನಾರೀವರ್ಣನೆ, ಚಾಡಿಗಳನ್ನು ತಡೆಯಲು ಕಟ್ಟಿಕೊಂಡ ಪ್ರಾಕಾರಗಳಂತೆ ಅವನ ಕಿವಿಗಳಿದ್ದವು. "ಅರಸು ಅಚ್ಯುತ ರಾಯನು ವಿಶೇಷಜ್ಞತೆಗೆ ವಿಲಾಸಸ್ಥಾನನೂ, ದಾನಕ್ಕೆ ವಿಶ್ವಾಸ ಭೂಮಿಯೂ, ಸುಶೀಲರಿಗೆ ಮೇರೆಯೂ, ಗಾಂಭೀರ್ಯಕ್ಕೆ ಆಶ್ರ ಯನೂ, ಸೌಜನ್ಯಕ್ಕೆ ರಕ್ಷಕನೂ, ಸುಚರಿತೆಗೆ ಆಗರನೂ, ಸಾಹಿತ್ಯಸಂಗೀತಗಳಿಗೆ ಸಂಕೇತಸ್ಥಾನನೂ, ಸೌಂದರ್ಯದ ರಾಶಿಯೂ, ಸತ್ಯವಚನಕ್ಕೆ ನಿತ್ಯವಿಲಾಸನೂ, ಎಲ್ಲ ಪ್ರಾಮಾಣಿಕ ಗುಣಗಳಿಗೆ ಆವಾಸಸ್ಥಾನನೂ ಆಗಿದ್ದನು." ಇತ್ಯಾದಿ ವರ್ಣನೆ ಗಳೂ, "ಅನುಚಿಂತಿತನಿಖಿಲಜನಹಿತಕೃತ್ಯ" "ಸೌಜನ್ಯ ಸೀಮಾವಧಿ" ಇತ್ಯಾದಿ ವಿಶೇಷಣಗಳೂ ನಮ್ಮ ಕವಯಿತ್ರಿಯು ಚಿತ್ರಿಸಬೇಕೆಂದಿರುವ ಆದರ್ಶ ಮಾನವಸ್ವಭಾವದ ಕಲ್ಪನೆಯನ್ನು ತಂದುಕೊಡುತ್ತವೆ.

ತಿರುಮಲಾಂಬೆಯ ಕೃತಿಯು ವರ್ಣನಾಪ್ರಧಾನವಾಗಿದ್ದು ಸಂಸ್ಕೃತ ಭಾಷೆಯ ಮೇಲಿನ ತನ್ನ ಪ್ರಭುತ್ವವನ್ನು ಸೂರೆಗೊಳಿಸು ವದರಲ್ಲಿಯೇ ಅವಳ ಗಮನವಿದ್ದರೂ ಕಥಾನಾಯಕನ ಶಬ್ದ ಚಿತ್ರಣದ ಪದರುಗಳಲ್ಲಿ ಮಾನವಸ್ವಭಾವಚಿತ್ರಣವೂ ಮೂಡಿ ಬಂದಂತೆ ಅವಳ ಇನ್ನಿತರ ವರ್ಣನೆಗಳಲ್ಲಿ ಅವಳ ನಿಸರ್ಗನಿರೀಕ್ಷ ಣೆಯೂ ಕಲ್ಪನೆಯ ಚಾತುರ್ಯವೂ ಪ್ರತಿಫಲಿತವಾಗಿವೆ.

ಅರವಿಂದಬಂಧುಕುರವಿಂದಪಿಧಾನೇ ।
ಚಪಲೇನ ಬಾಲಶಶಿನಾ ವ್ಯಪನೀತೇ ।
ಘುಸೃಣಮ್ ವಿಯನ್ಮಘವನೀಲಕರಂಡಾತ್ ।
ಗಲಿತಮ್ ಯಥಾ ಘನಮದೃಶ್ಯತ ಸಂಧ್ಯಾ ॥

"ತುಂಟ ಬಾಲಕ ಚಂದಿರನು ಮುಗಿಲೆಂಬ ಕುಂಕುಮ ಕರಡಿಗೆಯ ಮುಚ್ಚಳದಂತಿದ್ದ ಸೂರ್ಯನನ್ನು ಕಿತ್ತೊಯ್ಯಲು ಮುಗಿಲಿನ ತುಂಬೆಲ್ಲ ಕುಂಕುಮ ಹರಡಿದಂತೆ ಸಂಜೆಯ ಕೆಂಬಣ್ಣ ಕಾಣುತ್ತದೆ."

ಮುಹುಃ ಸರೋವಾರಿಷು ಕೇಲಿಲೋಲಾ ।
ನಿಮಜ್ಜನೋನ್ಮಜ್ಜನಮಾಚರಂತೀ ।
ಬಲಾಹಕಾಂತಃ ಪರಿದೃಶ್ಯಮಾನಾ ।
ಸೌದಾಮಿನೀವಾಜನಿ ಚಂಚಲಾಕ್ಷೀ ॥

"ಸರೋವರದಲ್ಲಿ ಜಲಕ್ರೀಡೆಯನ್ನಾಡುವಾಗ ಮುಳುಮುಳುಗಿ ಏಳುತ್ತಿದ್ದ ಓರ್ವ ಚಂಚಲಾಕ್ಷಿಯು ಮೋಡಗಳ ಅಂಚಿನಲ್ಲಿ ಮೂಡಿ ಮುಳುಗುವ ಮಿಂಚಿನ ಬಳ್ಳಿಯಂತೆ ಕಂಡಳು."

ಸ್ಥಿತಾಮ್ ಪುರಸ್ತಾದತಿದೂರ ಏವ ।
ಕ್ರಮೇಣ ಚ ಸ್ವಸ್ಯ ವಶಮ್ ಪ್ರಪನ್ನಾಮ್ ।
ವೋಢಾ ನವೋಢಾಮಿವ ಸಾನುರಾಗಃ ।
ಛಾಯಾಮ್ ತರುಃ ಕ್ರೋಡಗತಾಮುತಾನೀತ್ ॥

"ವೃಕ್ಷವು ಮೊದಲು ದೂರವಿದ್ದು 'ಕ್ರಮೇಣ ತನ್ನ ವಶದಲ್ಲಿ ಬರುತ್ತಿದ್ದ ನೆರಳನ್ನು, ಹೊಸದಾಗಿ ಮದುವೆಯಾದ ಯುವಕನು ತನ್ನ ಪ್ರಿಯೆಯನ್ನು ಬರಮಾಡಿಕೊಳ್ಳುವಂತೆ ಬರಮಾಡಿಕೊಂಡಿತು." ಎಂಬಿವೇ ಮೊದಲಾದ ವರ್ಣನೆಗಳು ನಮ್ಮ ಕವಯಿತ್ರಿಯ ಕಲ್ಪನಾ ಚಾತುರ್ಯವನ್ನೂ, ನಿಸರ್ಗಸೌಂದರ್ಯಪ್ರೇಮವನ್ನೂ ತೋರಿಸು

ತ್ತವೆ. ಅಚ್ಯುತರಾಯನ ತಾರುಣ್ಯದ ವರ್ಣನೆ ರಾಜಕನ್ಯೆಯ ಸೌಂದರ್ಯದ ವರ್ಣನೆಗಳೂ ಸೊಗಸಾಗಿವೆ. ಸಮುದ್ರ ವರ್ಣನೆ, ತುಂಡೀರದೇಶದ ವರ್ಣನೆ ಮತ್ತು ಕಾವೇರಿಯ ವರ್ಣನೆಗಳು ಬಾಹ್ಯ ಸೃಷ್ಟಿಯ ಸೌಂದರ್ಯದ ಕಡೆಗೆ ನಮ್ಮ ಗಮನವನ್ನು ಸೆಳೆದರೆ ಅಚ್ಯುತರಾಯ ಮತ್ತು ವರದಾಂಬಿಕೆಯರ ವರ್ಣನೆಗಳು ಮಾನವನ ಸೌಂದರ್ಯದ ಸುಂದರ ಚಿತ್ರವನ್ನು ನಮ್ಮ ಮುಂದಿಡುತ್ತವೆ. ವರದಾಂಬಿಕೆಯನ್ನು ನೋಡಿ ರಾಜಕುಮಾರನ ದಶೆಯನ್ನು "ನಿಯಂತ್ರಿತ ಇವ, ನಿಯಮಿತ ಇವ, ನಿರಭಿಜ್ಞ ಇವ, ನಿಶ್ಚಲ-ಧ್ಯಾನಶೀಲ ಇವ, ನಿರುದ್ಧಮನೋವೃತ್ತಿಃ ನಿರ್ನಿಮೇಷವೀಕ್ಷಣಃ ಕ್ಷಣಮತಿಷ್ಠತ್ ।" ಎಂದು ನಮ್ಮ ಕವಯಿತ್ರಿಯು ಹೇಳಿದಾಗ ನಾವೂ ಕ್ಷಣಹೊತ್ತು ನಮ್ಮನ್ನು ಮರೆಯುತ್ತೇವೆ.

ಇಷ್ಟೊಂದು ಪ್ರೌಢವೂ ಸರಸವೂ ಆದ ಚಂಪೂಕಾವ್ಯವನ್ನು ಬರೆದ ತಿರುಮಲಾಂಬೆಯು ತನ್ನ ಕಾವ್ಯವು ಆಚಂದ್ರತಾರಕ ಬೆಳಗಲಿ ಎಂದು ಬಯಸಿಕೊಂಡದ್ದರಲ್ಲಿ ಸೋಜಿಗವೇನೂ ಇಲ್ಲ.

---

# ರಾಮಭದ್ರಾಂಬೆ

ತಿರುಮಲಾಂಬೆಯ ತರುವಾಯ ಸುಮಾರು ನೂರು ವರುಷಗಳ ನಂತರ ಇನ್ನೋರ್ವ ಪ್ರತಿಭಾಶಾಲಿಯಾದ ಸಂಸ್ಕೃತ ಕವಯಿತ್ರಿಯು ದಕ್ಷಿಣ ಭಾರತದ ತಂಜಾವೂರಿನಲ್ಲಿ ಆಗಿಹೋದಳು. ಇವಳು ಕ್ರಿ. ಶ. ೧೬೧೪ರಿಂದ ತಂಜಾವೂರಿನಲ್ಲಿ ಆಳಿದ, ತಂಜಾವೂರು ನಾಯಕರಲ್ಲಿಯೇ ಪರಾಕ್ರಮಿಯೂ ವಿದ್ಯಾಪಕ್ಷಪಾತಿಯೂ ಎಂದು ಪ್ರಸಿದ್ಧನಾದ ರಘುನಾಥನಾಯಕನ ಪ್ರೇಯಸಿ. ತನ್ನ ಗ್ರಂಥದ ಕೊನೆಯಲ್ಲಿ ತಾನು 'ನೂರು ಲೇಖನಿಗಳಿಂದ ಹದಿನೆಂಟು ಭಾಷೆಗಳಲ್ಲಿ ನಾಲ್ಕು ವಿಧವಾದ ಕವಿತೆಗಳನ್ನು ಬರೆಯಬಲ್ಲ ಸಾಹಿತ್ಯಸಾಮ್ರಾಜ್ಯಪೀಠವನ್ನೇರಿದವಳು' ಎಂದು ಹೇಳಿಕೊಳ್ಳುವಳು. ಇವಳ ಗುರು ತೆಲಗುಕವಿ ಕಾಳಯ್ಯನು ರಾಜಗೋಪಾಲವಿಲಾಸವೆಂಬ ತನ್ನ ಕೃತಿಯಲ್ಲಿ ಇವಳನ್ನು 'ಘಟಿಕಾಶತ ಗ್ರಂಥರಚನಾ ಸಮರ್ಥಳು' 'ರಸಗರ್ಭ ಸಂದರ್ಭ ರಚನಾ ನಿಪುಣಳು' ಎಂದು ಮುಂತಾಗಿ ಹೊಗಳುವನು.

ರಾಮಭದ್ರಾಂಬೆಯ ಕೃತಿ "ರಘುನಾಥಾಭ್ಯುದಯ"ವು ಒಂದು ಐತಿಹಾಸಿಕ ಕಾವ್ಯ. ವಿಜಯನಗರದ ರಾಯರ ಮಾಂಡಲಿಕರೂ ಅವರಿಗೆ ಬಹುಕಾಲದಿಂದ ನಿಷ್ಠೆಯಿಂದ ವರ್ತಿಸಿದವರೂ ಆದ ತಂಜಾವೂರು ನಾಯಕರ ಮನೆತನದಲ್ಲಿ ಅಚ್ಯುತಪ್ಪನಾಯಕನ ತರುವಾಯ ಪಟ್ಟಕ್ಕೆ ಬಂದ ರಘುನಾಥನಾಯಕನೇ ಈ ಕಾವ್ಯದ ಕಥಾನಾಯಕನು. ಇಲ್ಲಿ ವರ್ಣಿಸಿದ ಘಟನೆಗಳು ಕ್ರಿ. ಶ. ೧೬೨೦ರ ಸುಮಾರಿಗೆ ನಡೆದ ಘಟನೆಗಳು. ಐತಿಹಾಸಿಕ ಘಟನೆಗಳ ಉಲ್ಲೇಖ ಮತ್ತು ಕಾವ್ಯಗುಣಗಳು ಈ ಎರಡೂ ದೃಷ್ಟಿಯಿಂದಲೂ ರಾಮ

ಭದ್ರಾಂಬೆಯ ಕೃತಿಯು ಮಹತ್ವವುಳ್ಳದ್ದಾಗಿದೆ. ಹನ್ನೆರಡು ಸರ್ಗದ ಈ ಕಾವ್ಯದಲ್ಲಿ ೭, ೮, ೯ ಮತ್ತು ೧೦ನೆಯ ಸರ್ಗಗಳು ಆ ಕಾಲವ ಮಹತ್ವದ ಐತಿಹಾಸಿಕ ಘಟನೆಗಳಿಂದ ತುಂಬಿವೆ. ೬ನೆಯ ಸರ್ಗದಲ್ಲಿ ತಂಜಾವೂರು ನಾಯಕರ ಮನೆತನದ ಇತಿ-ಹಾಸವಿದೆ. ಮೊದಲಿನ ಐದು ಸರ್ಗಗಳಲ್ಲಿ ಚೋಳದೇಶದ ವರ್ಣನೆ, ತಂಜಾವೂರು ನಗರದ ವರ್ಣನೆ, ರಘುನಾಥನಾಯಕನ ಶಬ್ದಚಿತ್ರ, ಅವನ ದಿನಚರಿ ಇತ್ಯಾದಿ ವಿಷಯಗಳು ಬಂದಿವೆ. ೧೧ ಮತ್ತು ೧೨ನೆಯ ಸರ್ಗಗಳು ಈ ಕಾವ್ಯಕ್ಕೆ ಕಳಸದಂತಿದ್ದು ಅರಮನೆಯ ಕಲಾಪೂರ್ಣ ಹಾಗೂ ವಿಲಾಸಮಯ ಜೀವನದ ಚಿತ್ರಣದಿಂದ ತುಂಬಿವೆ. ಹೀಗೆ ಮೊದಲಿನ ಐದು ಮತ್ತು ಕೊನೆಯ ಎರಡು ಸರ್ಗಗಳಲ್ಲಿ ಕವಯಿತ್ರಿಯ ಕಾವ್ಯಪ್ರತಿಭೆಯೂ ನಡುವಿನ ಸರ್ಗ ಗಳಲ್ಲಿ ಆ ಕಾಲದ ಇತಿಹಾಸವೂ ಮೂಡಿಬಂದಿವೆ. ರಾಮ-ಭದ್ರಾಂಬೆಯ ಕೃತಿಯಲ್ಲಿ ಗಂಗಾದೇವಿಯ ಕೃತಿಯಷ್ಟು ಸರಸತೆ ಹಾಗೂ ಸಹಜತೆಗಳಿಲ್ಲದಿದ್ದರೂ ತಿರುಮಲಾಂಬೆಯ ಕೃತಿಯಂತೆ ಕೇವಲ ಪಾಂಡಿತ್ಯಪ್ರದರ್ಶನಪ್ರಿಯತೆಯೂ ಅತಿಕ್ಲಿಷ್ಟಕಲ್ಪನೆ ಗಳೂ ಇರುವದಿಲ್ಲ. ಪಾಂಡಿತ್ಯವು ಸರಸನಿವೇದನೆಗೆ ಅಷ್ಟೊಂದು ಕಾಲ್ತೊಡಕಾಗಿಲ್ಲ.

ಈ ಕಾವ್ಯದಲ್ಲಿ ಬರುವ ಐತಿಹಾಸಿಕ ಘಟನೆಗಳಲ್ಲಿ ವಿಜಯ ನಗರದ ಇತಿಹಾಸಕ್ಕೆ ಸಂಬಂಧಿಸಿದ ಎರಡು ಘಟನೆಗಳು ನಮ್ಮ ಆಸ್ಥೆಯನ್ನು ಕೆರಳಿಸುತ್ತವೆ.

**ಅತಿ ಪ್ರಗಲ್ಭೈರಥ ಪಾರಸೀಕೈಃ ಸಮಮ್ ಪ್ರವೃತ್ತೇ ಸತಿ ಸಂಪರಾಯೇ।**
**ಕರ್ನಾಟಕ ರಕ್ಷಾಕರಣೇ ನಿತಾಂತಮ್ ವಿಚಾರವಾನ್ ವೆಂಕಟದೇವ ರಾಯಃ ॥**

**ರಣೇ ಸಹಾಯಮ್ ರಘುನಾಥಭೂಪ ಮಯಾಚತೋರ್ಜಸ್ವಲ ಮಚ್ಯುತೇಂದ್ರಮ್ ॥**

ಕ್ರಿ. ಶ. ೧೫೮೫–೧೬೧೪ ರ ವರೆಗೆ ಚಂದ್ರಗಿರಿ ಮತ್ತು ಪೆನುಗೊಂಡಗಳಲ್ಲಿದ್ದು ವಿಜಯನಗರದ ರಾಜ್ಯವನ್ನು ಮುಂದುವರಿಸಿದ ವೆಂಕಟದೇವರಾಯನು ಜೀರ್ಣವಾದ ಮತ್ತು ಮೇಲಿಂದಮೇಲೆ ಶತ್ರುಗಳ ದಾಳಿಗೆ ಈಡಾಗುತ್ತಿರುವ ಸಾಮ್ರಾಜ್ಯದ ಭದ್ರತೆಗಾಗಿ ರಘುನಾಥನಾಯಕನನ್ನು ಸಹಾಯಕ್ಕೆ ಕರೆಯಿಸಿಕೊಂಡಿರುವ ಉಲ್ಲೇಖವು ಇಲ್ಲಿದೆ. ರಘುನಾಥನಾಯಕನು ಚಂದ್ರಗಿರಿಯಲ್ಲಿ ತಂಗಿ ಪೆನುಗೊಂಡದ ವರೆಗೂ ಹೋಗಿ ವೆಂಕಟಪತಿದೇವರಾಯನಿಗೆ ನೆರವಾಗಿ ತನ್ನ ಸಹಾಯಕ್ಕೆ ಪ್ರತ್ಯುಪಕಾರವೆಂದು ವೆಂಕಟಪತಿದೇವರಾಯನು ಕಾರಾಗೃಹದಲ್ಲಿಟ್ಟ ಜಿಂಜಿಯ ಕೃಷ್ಣಪ್ಪನಾಯಕನನ್ನು ಸೆರೆಮನೆಯಿಂದ ಬಿಡಿಸಿ ಕೃಷ್ಣಪ್ಪನಾಯಕನ ತಂಗಿಯನ್ನು ಮದುವೆಯಾದ ಘಟನೆಗಳು ಈ ಕಾವ್ಯದ ಏಳನೆಯ ಸರ್ಗದಲ್ಲಿ ಬಂದಿವೆ.

ಇನ್ನೊಂದು ಘಟನೆಯು ವೆಂಕಟಪತಿದೇವರಾಯನ ತರುವಾಯ ಪಟ್ಟಕ್ಕೆ ಬಂದ ಶ್ರೀರಂಗರಾಯನನ್ನು ಜಗ್ಗರಾಯನು ಕೊಲೆ ಮಾಡಿಸಿದ ಘಟನೆಯು.

ಸಾನುಜೋ ನಿಶಿ ಸ ಜಗ್ಗಮಹೀಶಃ ಪಾರ್ಥಿವಸ್ಯ ಭವನಮ್
ಪರಿವೇಷ್ಟ್ಯ ।
ಭೂಪತಿಮ್ ತದನುಪುತ್ರಕಲತ್ರೈರ್ನಿರ್ಘೃಣೋ ನಿಹತ-
ಮಾತನುತೇಸ್ಮ ॥
ತನಯೇಷು ನೃಪಾಲ ತಸ್ಯ ಕಂಚಿಚ್ಛಿಶುಮಾಪ್ತೋ ರಜಕಃ
ಸಮೇತ್ಯ ಶೀಘ್ರಮ್ ।
ಅನಯನ್ನಗರಾದ್ಬಹಿರ್ನಿಶಾಯಾ ಮತಿಚಾತುರ್ಯಾದ್ದ್ವಿಷತಾ
ಮನಕ್ಷಿಲಕ್ಷ್ಯಮ್ ॥

ವೆಂಕಟಪತಿದೇವರಾಯನ ರಾಣಿ ಬಾಯಮ್ಮನ ಕೃತಕ ಪುತ್ರ ಚಿಕ್ಕರಾಯನ ಪಕ್ಷವನ್ನು ವಹಿಸಿ ಶ್ರೀರಂಗರಾಯನನ್ನೂ ಅವನ

ಕುಟುಂಬದವರನ್ನೂ ಜಗ್ಗರಾಯನು ಕೊಲ್ಲಿಸಿದ ಘಟನೆಯೂ, ಕುಲಗೋತ್ರವು ತಿಳಿಯದ ಅನಾಮಧೇಯನಿಗೆ ರಾಜ್ಯವು ಹೋಗ ಬಾರದೆಂದು ಏಚಮನಾಯಕನು ಅಗಸನೋರ್ವನ ಮುಖಾಂತರ ಶ್ರೀರಂಗರಾಯನ ಮಗ ರಾಮರಾಯನನ್ನು ಪಾರುಮಾಡಿದ ಘಟನೆಯೂ ಈ ಕಾವ್ಯದ ಎಂಟನೆಯ ಸರ್ಗದ ಮೇಲಿನ ಶ್ಲೋಕ ಗಳಲ್ಲಿ ಬಂದಿವೆ. ಮುಂದೆ ಹತ್ತನೆಯ ಸರ್ಗದಲ್ಲಿ ಕಾವೇರಿಯ ದಂಡೆಯ ಮೇಲಿನ ತೋಪೂರಿನ ಬಳಿಯಲ್ಲಿ ಜಿಂಜಿ ಮತ್ತು ಮಧು-ರೆಯ ನಾಯಕರ ಸೈನ್ಯಕ್ಕೂ ತಂಜಾವೂರು ನಾಯಕರ ಸೈನ್ಯಕ್ಕೂ ನಡೆದ ಕಾಳಗದಲ್ಲಿ ಜಗ್ಗರಾಯನು ರಘುನಾಥನ ಆಯುಧಕ್ಕೆ ಆಹುತಿಯಾದುದಾಗಿ ಹೇಳಿದೆ.

ವಿಜಯನಗರಕ್ಕೆ ಸಂಬಂಧಿಸಿದ ಮೇಲಿನ ಎರಡು ಘಟನೆಗಳ ಲ್ಲದೆ ರಘುನಾಥನು ಪರಂಗಿಯವರನ್ನು ಸೋಲಿಸಲು ನೇಪಾಳ ದ್ವೀಪದ ರಾಜನಿಗೆ ನೆರವಾದುದು, ಭೈರವನ ಆರಾಧನೆಯಿಂದ ಪ್ರಬಲನಾಗಿ ಜನರನ್ನು ಪೀಡಿಸುತ್ತಿದ್ದ ಚೋಲಗನನ್ನು ಸದೆಬಡೆ ದುದು ಇವೇ ಮೊದಲಾದ ಐತಿಹಾಸಿಕ ಘಟನೆಗಳು ನಮ್ಮ ಕವ ಯಿತ್ರಿಯ ಕೃತಿಯಲ್ಲಿ ಉಲ್ಲಿಖಿತವಾಗಿವೆ.

ಕಾವ್ಯಗುಣಗಳ ದೃಷ್ಟಿಯಿಂದ ರಾಮಭದ್ರಾಂಬೆಯ ಕೃತಿಯು ಪ್ರಥಮದರ್ಜೆಯ ಕೃತಿಯಾಗದಿದ್ದರೂ ಸಾಕಷ್ಟು ಉತ್ತಮ ಕೃತಿ ಯಾಗಿದೆ. ವರ್ಣನೆಗಳು ಬೇಸರಬರುವಷ್ಟು ಉದ್ದವಾಗಿಲ್ಲ. ಕಲ್ಪನೆ ಗಳು ಕೇವಲ ಸಾಂಪ್ರದಾಯಿಕವಾಗಿಲ್ಲ. ಹಿಂದಿನ ಕವಿಗಳ ಕಲ್ಪನೆ ಗಳನ್ನು ಅರಗಿಸಿಕೊಂಡು ಸಂದರ್ಭೋಚಿತವಾಗಿ ಮೆರುಗುಕೊಟ್ಟು ನಿವೇದಿಸಲು ಕವಯಿತ್ರಿಯು ಪ್ರಯತ್ನಿಸಿದ್ದಾಳೆ. ಅನೇಕ ಕಡೆಗೆ ಹೊಸ ಕಲ್ಪನೆಗಳು ಮೂಡಿವೆ. ಮಾತಿನ ಜಾಣ್ಮೆಯೂ ಕಂಡು ಬರುತ್ತದೆ. ಕಾವ್ಯವನ್ನು ಬರೆದ ಕಾಲದ ಛಾಯೆಯು ಒಡೆದು

ಕಾಣುತ್ತದೆ. ಮಧ್ಯಯುಗದ ಸಂಸ್ಕೃತ ಕವಿಗಳ ಅತಿಶಯೋಕ್ತಿ ಪ್ರಿಯತೆಯೇ ಮೊದಲಾದ ವ್ಯಾಮೋಹಗಳು ಇರುವವಾದರೂ ವಾಸ್ತವತೆಯೂ ಕಂಡುಬರುತ್ತದೆ.

ಅರಮನೆಯ ಜೀವನಕ್ಕೆ ಸಂಬಂಧಿಸಿದ ಮತ್ತು ಮಹಿಳೆಯರ ಗಮನವನ್ನೇ ಸೆಳೆಯಬಲ್ಲ ಕೆಲವು ಸಂದರ್ಭಗಳು ಓದುಗರ ಆಸೆಯನ್ನು ಕೆರಳಿಸುತ್ತವೆ. " ಅರಸನು ಪ್ರಾತರ್ವಿಧಿಗಳನ್ನು ಮುಗಿಸಿದ ಮೇಲೆ ಓರ್ವಳು ಸ್ನಾನದ ವೇಳೆಯಾಯಿತೆಂದು ಸೂಚಿಸುವಳು. ಇನ್ನೋರ್ವಳು ಮಜ್ಜನಗೃಹಕ್ಕೆ ಕರೆದೊಯ್ಯುವಳು ಮೂರನೆಯವಳು ಹಿಂದಿನ ದಿನದ ಗಂಧಮಾಲ್ಯಗಳನ್ನು ತೆಗೆಯುವಳು. ಮತ್ತೋರ್ವಳು ಕೈಬಳೆಗಳ ಮಧುರ ನಿನಾದದೊಡನೆ ಕೊರಳೊಳಗಿದ್ದ ಹಾರವು ಚಲಿಸುವಂತೆ, ಬದಿಗೆ ಬೀಳುವ ಹೆರಳನ್ನು ಸಾವರಿಸಿಕೊಳ್ಳುತ್ತ, ಶ್ರಮದ ಬೆವರಿಗೆ ಕುಂಕುಮವು ಕರಗುತ್ತಿರಲು, ಸುವಾಸನೆಯ ಎಣ್ಣೆಯನ್ನು ಅರಸನ ನೆತ್ತಿಗೂ ಅಂಗಗಳಿಗೂ ತನ್ನ ಪೇಶಲವಾದ ತೋಳುಗಳನ್ನು ತಾಕಿಸುತ್ತ ಹಚ್ಚುವಳು. ಇನ್ನೋರ್ವಳು ನೀರೆರೆಯುವಳು." ಹೀಗೆಯೇ ರೇಶಿಮೆಯ ವಸ್ತ್ರದಿಂದ ಒರಿಸಿ ಕನ್ನಡಿಯನ್ನು ತೋರಿಸಿ, ಬಟ್ಟೆಯನ್ನೂ ಆಭರಣಗಳನ್ನೂ ತೊಡಿಸಿ ಸೂರ್ಯಾರಾಧನೆಗೆ ಕಳಿಸುವ ವರೆಗೆ ರಮಣಿಯರ ಒಂದು ತಂಡವೇ ರಾಜನ ಸೇವೆಯಲ್ಲಿರುವ ವಿಲಾಸಮಯ ಜೀವನದ ಚಿತ್ರವನ್ನು ರಾಮಭದ್ರಾಂಬೆ ಚಿತ್ರಿಸಿದ್ದಾಳೆ.

ರಾಜನಿಗೆ ಕಮಲವಿಲಾಸ, ಅಚ್ಯುತರಂಗ, ರಾಮಸೌಧ, ಇಂದಿರಾಮಂದಿರ, ವಿಜಯೋತ್ತರವೆಂದು ಅನೇಕ ರಾಜಭವನಗಳಿದ್ದವು. ಒಂದೊಂದು ಭವನವೂ ಒಂದೊಂದು ಕಾರ್ಯಕ್ಕಾಗಿ ಮೀಸಲಾಗಿದ್ದಿತು. ಒಂದೆಡೆಗೆ ರಾಜಕಾರ್ಯವಾದರೆ ಇನ್ನೊಂದೆಡೆಗೆ ಕವಿ

ಗಳನ್ನೂ ವಿದ್ವಾಂಸರನ್ನೂ ಭೆಟ್ಟಿಯಾಗುವದು. ಮೂರನೆಯದು ಸಂಗೀತ-ನೃತ್ಯಾದಿ ಕಲೆಗಳ ಆರಾಧನೆಗೆ ಮೀಸಲು. ದೇವತಾ ರಾಧನೆ ಮತ್ತು ಧರ್ಮಕಾರ್ಯಗಳಿಗೆ ಬೇರೊಂದು ಭವನವು ನಿರ್ಮಿತವಾಗಿದ್ದಿತು. ಅರಮನೆಯಲ್ಲಿಯೇ ಒಂದು ವಿಶಾಲವಾದ ನಾಟ್ಯಶಾಲೆಯಿದ್ದಿತು. ಹನ್ನೆರಡನೆಯ ಸರ್ಗದಲ್ಲಿ ಆ ನಾಟ್ಯ ಶಾಲೆಯಲ್ಲಿ ನಡೆಯುತ್ತಿರುವ ನಾಟ್ಯಗಳ ಸೊಗಸಾದ ವರ್ಣನೆ ಇದೆ. ರಘುನಾಥನಾಯಕನೊಡನೆ ಅಲ್ಲಿ ಅನೇಕ ದೇಶದ ಅರಸರು' ಕವಿಗಳು, ಗಾಯಕರು ಮತ್ತು ಇನ್ನೂ ಅನೇಕ ರಸಿಕರು ಪ್ರೇಕ್ಷಕ ರಾಗಿರುತ್ತಿದ್ದರು. ನಾಟ್ಯದ ಅಧಿದೇವತೆಯೇ ರೂಪತಾಳಿ ಬಂದಂತಿ ರುವ ನರ್ತಕಿಯೋರ್ವಳು ತನ್ನ ಪ್ರಯೋಗವನ್ನು ತೋರಿಸಿದುದಾಗಿ ಕವಯಿತ್ರಿ ಹೇಳುವಳು.

**ಕುಲೇನ ರೂಪೇಣ ಗುಣೇನ ವಿದ್ಯಯಾ ಪರಸ್ಪರಮ್**
**ಸಾಮ್ಯಜುಷಾಃ ಪರಶ್ಶತಾಃ ।**
**ಅನರ್ತಿಷುದ್ಧೃಕ್ಷ್ವಿಮುಖ್ಯೈರಣೂದರಾ ರಯಾದ-**
**ಹಂಪೂರ್ವಿಕಯಾ ರಸೋತ್ತರಮ್ ॥**

ರೂಪ-ಗುಣ-ಯೌವನಗಳಲ್ಲಿ ಸಮಾನರಾದ ನೂರಾರು ನರ್ತಕಿ ಯರ ಗುಂಪು ನೃತ್ಯಗಳು ಅಲ್ಲಿ ನಡೆಯುತ್ತಿದ್ದವು. ಈ ಸಂದರ್ಭ ದಲ್ಲಿ ರಾಮಭದ್ರಾಂಬೆಯು ಅನೇಕ ರಾಗ ತಾಳಗಳ ಮತ್ತು ನೃತ್ಯ ಭಂಗಿಗಳ ಹೆಸರುಗಳನ್ನು ಉಲ್ಲೇಖಿಸುವಳು.

ರಘುನಾಥನ ಆಸ್ಥಾನದಲ್ಲಿ ವಿದ್ಯಾವತಿಯರೂ, ಕವಿತಾ ಸಾಮರ್ಥ್ಯವುಳ್ಳವರೂ, ಕಲಾವಿದೆಯರೂ ಆದ ಅನೇಕ ಮಹಿಳೆ ಯರಿದ್ದರು. ಕೆಲವರು ಅನೇಕ ಭಾಷೆಗಳನ್ನು ಬಲ್ಲವರಾಗಿದ್ದರು. ಆಶುಕವಿತೆಗಳನ್ನು ಬರೆಯುವದರಲ್ಲಿ ನಿಪುಣೆಯರಾಗಿದ್ದರು. ಇನ್ನು ಕೆಲವರು ಸ್ವತಃ ಕವಯಿತ್ರಿಯರಾಗದಿದ್ದರೂ ಮಹಾಕವಿಗಳ ಕಾವ್ಯ

ನಾಟಕಗಳನ್ನು ವಿವರಿಸಲು ಸಮರ್ಥರಾಗಿದ್ದರು. ಕೆಲವರು ನ್ಯಾಯವ್ಯಾಕರಣಾದಿಶಾಸ್ತ್ರಗಳಲ್ಲಿ ಪಾರಂಗತೆಯರಾಗಿದ್ದರು. ಮತ್ತೆ ಕೆಲವರು ಯಕ್ಷಗಾನ, ನೃತ್ಯ, ಸಂಗೀತ ಮೊದಲಾದವುಗಳಲ್ಲಿ ಬಲ್ಲಿದೆಯರಾಗಿದ್ದರು. ಹೀಗೆ ವಿದಗ್ಧೆಯರೂ, ಚತುರೆಯರೂ, ಆದ ಮಹಿಳೆಯರು ಇರುವದನ್ನು ನೋಡಿದರೆ ರಾಮಭದ್ರಾಂಬೆಯಂತೆ ಅವರಲ್ಲಿ ಇನ್ನೂ ಕೆಲವರು ಕಾವ್ಯಗಳನ್ನು ಬರೆದಿರಬಹುದೆಂದು ಊಹಿಸಬಹುದಾಗಿದೆ. ಈ ಗುಂಪಿನಲ್ಲಿದ್ದ ಮಧುರವಾಣಿ ಎಂಬ ಇನ್ನೊರ್ವಳು ರಘುಥನಾಯಕನ ತೆಲಗುರಾಮಾಯಣವನ್ನು ಸಂಸ್ಕೃತದಲ್ಲಿ ಭಾಷಾಂತರಿಸಿದುದು ಪ್ರಸಿದ್ಧವೇ ಇದೆ.

ರಾಮಭದ್ರಾಂಬೆಯ ಕಾವ್ಯದಲ್ಲಿಯ ಇನ್ನಿತರ ಸಂದರ್ಭಗಳು ರಸವತ್ತಾಗಿವೆ. ಅವಳ ಚೋಳದೇಶದ ವರ್ಣನೆ ಕಾವೇರೀತೀರದ ತೋಟಗಳಿಂದ ಶೋಭಿಸುವ ಆ ರಮಣೀಯ ನಾಡಿನ ಸುಂದರ ಚಿತ್ರವಾಗಿದೆ. ತಂಜಾವೂರುನಗರಿಯ ವರ್ಣನೆಯೂ ಕೂಡ ಹೃದಯಗ್ರಾಹಿಯಾಗಿದೆ.

ರಘುನಾಥರಾಯನ ವರ್ಣನೆಯಂತೂ ಅವಳು ಮನಸ್ಸು ತುಂಬಿ ಮಾಡಿದ ವರ್ಣನೆ.

ಪ್ರಜ್ಞಾ ಕೃಪಾಣೀಚ ಪರಸ್ಪರಮ್ ದ್ವೇ ಧೃತಾಭ್ಯಸೂಯೇ
ಇವ ಯಸ್ಯ ತೀಕ್ಷ್ಣೇ ।
ಪ್ರಸ್ತೂಯಮಾನೇ ಸಮಿತೌ ಪರೇಷಾಮ್ ಪ್ರಕಲ್ಪಯೇತೇ
ಹೃದಯಪ್ರಭೇದಮ್ ॥

“ ರಘುನಾಥನ ಪ್ರಜ್ಞೆಯೂ ಖಡ್ಗವೂ ಪರಸ್ಪರ ಸ್ಪರ್ಧೆಯುಳ್ಳವುಗಳಂತೆ ಯುದ್ಧದಲ್ಲಿಯೂ ಸಭೆಯಲ್ಲಿಯೂ ಪರರ ಹೃದಯ-ಚ್ಛೇದನವನ್ನು ಮಾಡುತ್ತಿದ್ದವು ” ಎಂದು ಅವನ ವ್ಯಕ್ತಿತ್ವದ ಎರಡೂ ಬದಿಗಳನ್ನು ಚಾತುರ್ಯದಿಂದ ಚಿತ್ರಿಸಿದ್ದಾಳೆ. ಕಾವ್ಯ

ದುದ್ದಕ್ಕೂ ಸಂದರ್ಭ ಬಂದಾಗೆಲ್ಲ ತನ್ನ ಪ್ರಿಯ ಕಥಾನಾಯಕನನ್ನು ವರ್ಣಿಸಿಯೂ ಅವನ ಪರಾಕ್ರಮ, ವಿದ್ಯೆ, ಔದಾರ್ಯ, ರೂಪಗಳನ್ನು ಹೊಗಳಿಯೂ ಅವಳಿಗೆ ತೃಪ್ತಿಯೆನಿಸದಂತಿಲ್ಲ

ಅಮುಷ್ಯ ಸೌಂದರ್ಯಮಮುಷ್ಯ ಧೀರತಾಮಮುಷ್ಯ
ಗಾಂಭೀರ್ಯಮಮುಷ್ಯ ವೈಭವಮ್ ।
ಅಮುಷ್ಯ ವೈದಗ್ಧ್ಯಮಮುಷ್ಯ ವರ್ತನಮ್ ಫಣೀಶ್ವರೋ
ವಾ ಭಣಿತುಂ ನ ಹಿ ಪ್ರಭುಃ ॥

ಎಂದು ನೇತಿನೇತಿಯಾಗಿ ಅವನನ್ನು ಹೊಗಳಿದ್ದಾಳೆ.

ಭಾರತೀಯ ವಾಙ್ಮಯಸೃಷ್ಟಿಯಲ್ಲಿ ಮಹಿಳೆಯರ ಪಾತ್ರವು ಪುರುಷರಷ್ಟು ವ್ಯಾಪಕವಾಗಿಲ್ಲವಾದರೂ ಅದು ಇಲ್ಲವೇ ಇಲ್ಲವೆಂದು ಹೇಳುವದು ಸತ್ಯಕ್ಕೆ ದೂರವಾದ ಮಾತು. ವೇದಕಾಲದಲ್ಲಿಯೇ ಘೋಷಾ, ಆಪಲಾ ಮೊದಲಾದ ಆರ್ಷ ಕವಯಿತ್ರಿಯರೂ ಗಾರ್ಗಿ, ಆತ್ರೇಯೀ ಮೊದಲಾದ ಬ್ರಹ್ಮವಾದಿನಿಯರೂ ಆಗಿ ಹೋಗಿರುವದು ಸುವಿದಿತವಿದೆ. ಅಲ್ಲಿಂದೀಚೆಗೆ ಈ ವರೆಗೆ ನಿರ್ದೇಶಿಸಿದ ಅನೇಕ ಕವಯಿತ್ರಿಯರು ತಮ್ಮ ಕೃತಿಗಳನ್ನು ಬಿಟ್ಟು ಹೋಗಿದ್ದಾರೆ. ನಮಗೆ ದೊರೆಯದೇ ಇರುವ ಇನ್ನೂ ಅನೇಕ ಕೃತಿಗಳು ಕಾಲನ ದವಡೆಯಲ್ಲಿ ಸಿಕ್ಕು ಹೋಗಿರಬಹುದು. ರಾಜಶೇಖರನು ಹೇಳುವಂತೆ ಸಾಹಿತ್ಯ ನಿರ್ಮಾಣಕ್ಕೆ ಸಂಸ್ಕಾರವು ಮುಖ್ಯವೇ ಹೊರತು ಲಿಂಗಭೇದವಲ್ಲ. ವಾಗರ್ಥಗಳ ಸಮವಾಯವಾದ ಸಾಹಿತ್ಯವು ಕವಿ ಕವಯಿತ್ರಿಯರ ಸಮವಾಯದ ನಿರ್ಮಿತಿಯಾಗಿ ಬೆಳೆದು ಬಂದರೆ ಅದೆಷ್ಟು ಸೊಗಸು ?

---

## ಸಂಸ್ಕೃತಕವಯಿತ್ರಿಯರ ಸುಭಾಷಿತಗಳು

### (೧) ಬಿಡಿಪದ್ಯಗಳಿಂದ

१. भर्तृप्राणाः स्त्रियः । ( भावदेवी )

२. सा किं न रम्या स च किं न रन्ता बलीयसी केवलमी-
श्वरेच्छा । ( लक्ष्मीः )

३. परलोकहितं तात प्रातरुत्थाय चिन्तय ।
इह ते कर्मणामेव विपाकश्चिन्तयिष्यति ॥ ( मदालसा )

४. कोपे निषण्णस्य च बद्धमुष्टेः ।
मलिम्लुचाकारविभीषणस्य ॥
आकारतः केवलमस्ति भेदः ।
कृपाणकस्यापि धनाणकस्य ॥ ( पद्मावती )

५. स्वभावसिद्धं वक्रत्वं खलस्य च हलस्य च ।
मुग्धाक्षेपं तयोस्सोढुमलमेकैव सा क्षमा ॥ ( पद्मावती )

६. सृजति तावदशेषगुणाकरम् ।
पुरुषरत्नमलङ्करणं भुवः ॥
तदनु तत् क्षणभङ्गि करोति चे-
दहह कष्टमपण्डितता विधेः ॥ ( फल्गुहस्तिनी )

७. के कृतघ्नमुपासते । ( शीलाभट्टारिका )

८. प्रायो विदग्धवनितानवसङ्गमेषु ।
पुंसां मनःप्रचलतीति किमत्रचित्रम् ॥ ( शीता )

९. स्नेहो निबन्धनमनर्थपरम्पराणाम् । ( सुभद्रा )

## ( ೨ ) ಕೌಮುದೀಮಹೋತ್ಸವದಿಂದ

१०. ननु प्रमादभीरुत्वाद्विवेकिनां कालक्षेपवत्यः कार्यसिद्धयः।

११. पराक्रमोपनतामेव सिद्धिमभिकाङ्क्षते क्षात्रं तेजः।

१२. तेजस्विनो हि पुरुषस्य सम्पदुद्योतनप्रतिपक्षभूता विपदपि न च्छायेव परिहरति पार्श्वम्।

१३. अन्धस्य कूपपतनं संवृत्तम्। पूर्वं राज्यनाशः, ततः स्त्रीतन्तुना बन्धनम्।

१४. सर्वः स्वकार्यकृपणो जीवलोकः।

१५. भृशमाकुलयति मारिषमिव रङ्गोन्मुखी वाक्छ्रीः।

१६. निकृतिमति रिपौ विप्रलम्भो न दोषः।

१७. सङ्गतिश्चिरमचिन्तितपूर्वा।
निर्वृतिप्रणयिनी मिथुनानाम्॥

१८. प्राप्ते मनोरथशतेऽपि कुतः प्रमोदः।

१९. प्रायशः पृथिवीशानां भोगैश्वर्यविडम्बना।

२०. बह्वाश्चर्याणि दैवतानि।

२१. सङ्घचारिण्यभ्युदयपरम्परा।

२२. कुर्वन्ति भृत्या वचनं प्रभूणाम्।
प्रयोजनोद्देशमलक्षयन्तः॥
श्रुत्यर्थमार्याः फलमस्तु मा वा।
स्वधर्म इत्येव समाचरन्ति॥

२३. यौवनारम्भयोगेन शोभामसदृशीं गता।
शिक्षागुणविशेषेण सूरेरिव सरस्वती॥

## ( ೩ ) ಮಧುರಾವಿಜಯದಿಂದ

२४ क्वचिदर्थः क्वचिच्छन्दः क्वचिद्भावः क्वचिद्रसः ।
यत्रैते सन्ति सर्वेऽपि स निबन्धो न लभ्यते ॥

२५. प्रबन्धमीषन्मात्रोऽपि दोषो नयति दूष्यताम् ।
कालागरुद्रवभरं शुक्तिक्षारकणो यथा ॥

२६. निर्दोषाप्यगुणा वाणी न विद्वज्जनरञ्जिनी ।
पतिव्रताप्यरूपा स्त्री परिणेत्रे न रोचते ॥

२७. गुणं विहाय काव्येषु दुष्टो दोषं गवेषते ।
वनेषु त्यक्तमाकन्दः काको निम्बमपेक्षते ॥

२८. चौर्यार्जितेन काव्येन कियज्जीव्यति दुर्जनः ।
आहार्यरागो न चिरं रुचिरः कृत्रिमोपलः ॥

२९. न प्रार्थनीयः सत्काव्यश्रुत्यै सहृदयो जनः ।
स्वादुपुष्परसास्वादे कः प्रेरयति षट्पदम् ॥

३०. गुरूपदेशः किल कथ्यते बुधैः ।
अकर्कशं किञ्चन रत्नकुण्डलम् ॥
अमेचकं नूतनमञ्जनं सताम् ।
अजातगात्रक्षयमद्भुतं तपः ॥

३१. तमः प्रदोषे तरुणिम्नि कस्य वा ।
समञ्जसं पश्यति दृष्टिरञ्जसा ॥

३२. कथं नु विश्वासपदं मनीषिणाम् ।
मनोजमायाभटशस्त्रिकाः स्त्रियः ॥

३३. दुनोति दण्डेन दुरुत्सहेन यः ।
प्रसह्य राष्ट्रं पदमात्मसम्पदाम् ॥
स वृक्षमारुह्य कुठारपातनम् ।
करोति मूलोद्दलनाय दुर्मतिः ॥

३४. न मदः कस्य विकारकारणम् ।

३५. हृदयं कः खलु वेत्ति रागिणाम् ।

३६. बत विश्वासपदं न कामिनः ।

३७. गुणेषु को मत्सरमादधाति ।

## ( ೪ ) ವರದಾಂಬಿಕಾಪರಿಣಯದಿಂದ

३८. सतां प्रसादः सहजो न रोषः ।

३९. सन्तः पराधीनहृदोऽपि सन्तः सदानुकूला हि समाश्रितेषु ।

४०. तीव्रानुरागं हि तनोत्युपेक्षा ।

४१. अमेयतेजाः सदाशयस्सद्गुरुदीक्षयेव ।

४२. अर्थं नवीनमनघा सुकवेरिवोक्तिः ।
प्रत्यङ्मुखस्य यमिनः प्रतिभेव बोधम् ।

## ( ೫ ) ರಘುನಾಥಾಭ್ಯುದಯದಿಂದ

४३. आरामवाटीरतिवृष्टिरश्नत्यक्षीण्यनावृष्टिरहो प्रजानाम् ।

४४. धरणौ भूपतिरेव धर्महेतुः ।

४५. बलवत्प्राप्यपदं भजेत् किमन्यः ।

४६. परिभूतः परिभूयते जगत्याम् ।

४७. जगति महद्वाप्तिर्जायते गौरवाय ।

४८. किं वा तपोभिः कृतिनामलभ्यम् ।

४९. पाल्या प्राणापेक्षया हि प्रतिज्ञा ।

५०. संवर्धितः परभृता समये प्रपन्ने सद्यस्तमेव कलकण्ठयुवा जहाति ।

---

## ಸಂದರ್ಭ ಗ್ರಂಥಗಳು ಮತ್ತು ಲೇಖನಗಳು

1. Sanskrit Poetesses Vol. I & II.
— *Dr. J. B. Chaudhari*

2. History of Classical Sanskrit Literature pp. 391–397 & 599.
— *M. Krishnamachariar*

3. Sources of Vijayanagara History
— *Dr. S. Krishnaswami Aiyangar*

4. Introduction to Kaumudi Mahotsava
— *K. Ramakrishnakavi*

5. Introduction to Varadāmbika Pariṇayam
— *Dr. Lakshman Sarup*

6. Introduction to Raghunāthābhyudayam
— *Dr. T. R. Chintamani*

7. Epigraphica Indica Vol. IV. 1896–97 & Vol. XXIV pp. 286, 289.

8. Indian Antiquary Vol. VII pp. 45 & Vol. VIII pp. 163.

9. South Indian Inscriptions. Vol. IX pt. II pp. 576.

10. B. O. R. XII — *K. P. Jayaswal*
J. B. O. R. XIX do
Modern Review Vol. 45 do

11. Sanskrit & Prakrit Poetesses
*V. Raghavan*

Jr. of the Mythic Society Vol. XXV 1934

12. do Silver Jubilee Vol. — *Kale.*

13. Indian Historical Quarterly Vol. XIV 1938
— *K. Chattopadhyaya*

14. Indroduction to Sāhityadarpaṇa
— *P. V. Kane*

15. Andhra Historical Journal Vol. VI.
— *K. Raghavacharlu*

Jr. of the Mythic Society
Vol. XXIV 1933 do

16. Indian Culture Vol. IX 1943
— *Shakuntala Rao Shastri*

17. ಕರ್ನಾಟಕ ಗತವೈಭವ — ಆಲೂರು ವೆಂಕಟರಾಯರು

18. ದೀಪದಾನ ೧೯೫೪ — ಕೆ. ಟಿ. ಪಾಂಡುರಂಗಿ

19. ಕರ್ನಾಟಕ ಸಾಹಿತ್ಯ ಪರಿಷತ್ ಪತ್ರಿಕೆ Vol I.
— ಕೆ. ಆರ್. ಚಕ್ರವರ್ತಿ

20. ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ ೧೯೫೭
— ಎಸ್. ಎಚ್. ರಿತ್ತಿ

---

## ಇತರ ಪ್ರಕಟನೆಗಳು

1. **The Hindu Code Bill** **Rs. 2**
   *—Justice Gajendragadkar*

2. **Introduction to Karnatak Mysticism** **Re. 1**
   *—Dr. R. D. Ranade*

3. **Selections from the Mahabharata and the Ramayana** **Rs. 3**

4. **Pleistocene Studies in the Malaprabha Basin** **Rs. 15**
   *—Dr. R. V. Joshi*

5. **Karnataka's Trans-oceanic Contacts** **Rs 3**
   *—Dr. B. A. Saletore*

| | | |
|---|---|---|
| ೬. | ಕಾವ್ಯಮಂಜರಿ—ಭಾಗ ೧ | ರೂ. ೧ |
| ೭. | ,, ,, ಸಂಪುಟ ೨ | ರೂ. ೧ |
| ೮. | ಕಾವ್ಯಮಂಜರಿ—ಭಾಗ ೨ | ರೂ. ೧ |
| ೯. | ,, ,, ಸಂಪುಟ ೨ | ರೂ. ೧ |
| ೧೦. | ಗದ್ಯಮಂಜರಿ | ರೂ. ೨ |

ಕರ್ನಾಟಕ ವಿಶ್ವವಿದ್ಯಾಲಯ
ಧಾ ರ ವಾ ಡ